...ದೇವಾಲಯಗಳು ಕೆನಡಾದ ಪ್ರಮುಖ ಮತ್ತು ಜನಪ್ರಿಯ ...ಗಿದೆ.

ದೇವಾಲಯವು 30,000 ಚ.ಅಡಿ ವಿಸ್ತಾರದ ವಿಶಾಲ ಪ್ರದೇಶದಲ್ಲಿ 11 ದಶಲಕ್ಷ ಡಾಲರ್ (ಅಂದಾಜು ರೂ. 80 ಕೋಟಿ) ವೆಚ್ಚದಲ್ಲಿ ನಿರ್ಮಿತವಾಗಿದ್ದು, 2010ರಲ್ಲಿ ಇದರ ನಿರ್ಮಾಣ ಪೂರ್ಣಗೊಂಡಿತು. ದೇವಾಲಯವನ್ನು ಜಗತ್ತಿನ ಎಲ್ಲೆಡೆಯ 250ಕ್ಕೂ ಹೆಚ್ಚಿನ ಪವಿತ್ರ ನದಿಗಳಿಂದ ಸಂಗ್ರಹಿಸಲಾದ ಜಲದಿಂದ ಅಭಿಷೇಕ ಮಾಡಿ ಪವಿತ್ರಗೊಳಿಸಲಾಗಿದೆ.

ಈ ದೇಗುಲದ ಆರಂಭೋತ್ಸವ ಸಂದರ್ಭದಲ್ಲಿ 10,000ಕ್ಕೂ ಹೆಚ್ಚಿನ ಭಕ್ತರು ದೇವೀ ಶಾರದಾಂಬೆಗೆ ಮಹಾಕುಂಭಾಭಿಷೇಕ ಮಾಡಿರುವುದು ಒಂದು ವಿಶೇಷವೆನ್ನಬಹುದು. 30 ಅಡಿ ಎತ್ತರದ ಗೋಪುರ, 18 ಅಡಿ ಅಗಲದ ಮಂಟಪ, ಹಾಗೂ ಆದಿಶಂಕರಾಚಾರ್ಯರ ಜೀವನವನ್ನು ವರ್ಣಿಸುವ ಉತ್ಸವ ಪಥ, ಇವುಗಳು ದೇವಾಲಯದ ಮೂರು ಪ್ರಮುಖ ವೈಶಿಷ್ಟ್ಯಗಳೆನಿಸಿವೆ.

...ಶಿವ ಹಾಗೂ ವಿಷ್ಣುದೇವರ ದೇಗುಲಗಳಿದ್ದು ಎರಡೂ ದೇಗುಲಗಳ ಗರ್ಭಗುಡಿಯ ... ಇದು ಸಾಂಪ್ರದಾಯಿಕ ಶೈಲಿಯ ದೇವಾಲಯ ಶಿಲ್ಪವಾಗಿದೆ. ಇನ್ನೊಂದು ವಿಶೇಷವೆ... ಗುಡಿಗಳು ಚೋಳ ಮತ್ತು ಪಲ್ಲವರ ಶೈಲಿಯಲ್ಲಿದ್ದು, ವೆಂಕಟೇಶ್ವರ ಮತ್ತು ಅದರ ಪ... ಶೈಲಿಯಲ್ಲಿರುವುದು. ಅಷ್ಟೇ ಅಲ್ಲ ಅಯ್ಯಪ್ಪ ಸ್ವಾಮಿಯ ಗುಡಿಯು ಕೇರಳ ಶೈಲಿಯ... ಇನ್ನೊಂದು ವಿಶೇಷ.

ಹಿಂಭಾಗದಲ್ಲಿನ ಕಟ್ಟಡದಲ್ಲಿ 300 ಜನರಿಗೆ ಸ್ಥಳಾವಕಾಶವಿರುವ ಸಮುದಾಯ ಭವನವಿದೆ ಧಾರ್ಮಿಕ ಕಾರ್ಯಕ್ರಮಗಳಿಗೆ ಅನುಕೂಲಕರವಾಗಿದೆ.

## ಮಾರ್ಚ್ ತಿಂಗಳ ಜಾತ್ರೆ, ರಥೋತ್ಸವಾದಿಗಳು

| ವಿಶೇಷ ದಿವಸಗಳು |
|---|
| ...ರಾತ್ರಿ, ಶನೈಶ್ಚರ ಜಯಂತಿ, ಸರ್ವ ಶರಣರ ದಿನ, ಸಿದ್ಧಗಂಗಾ ಸಿದ್ಧಲಿಂಗೇಶ್ವರ ರಥ, ಅನಧ್ಯಯನ ...ಟ್ಟ ಉಮಾಮಹೇಶ್ವರ ಉತ್ಸವ, ಸಿದ್ಧಗಂಗಾ, ಶ್ರೀರಂಗಪಟ್ಟಣ, ದೊಡ್ಡಬಳ್ಳಾಪುರ ರಥ, ಕೆದೂರು, ...ಡಿ ಉತ್ಸವ, ಹುಬ್ಬಳ್ಳಿ ರಥ, ಬೈಲಹೊಂಗಲ ರಥ, ನಂದಿ ಭೋಗನಂದೀಶ್ವರ ರಥ, ರಾಬರ್ಟ್‌ಸನ್‌ಪೇಟೆ ...ಗೇಶ್ವರ ರಥ, ಗುಬ್ಬಿ ಅಮರಗೊಂಡ ಮಲ್ಲಿಕಾರ್ಜುನ ರಥ, ಕೊಳ್ಳೇಗಾಲ ಮಕ್ಕಳ ಮಹದೇಶ್ವರ ರಥ, ...ಮಲ್ಲೇಶ್ವರ ರಥ, ಕೂಡ್ಲು ಧ್ವಜ, ಕುರವತ್ತಿ ರಥ, ಸೂರಣಿಗಿ ರಥ, ಯಲಿಯೂರು ಉತ್ಸವ, ...ರು ವಿಷ್ಣುತೀರ್ಥ ಪುಣ್ಯದಿನ |
| ...ಶನಸ್ ಡೇ, ಶಿವರಾತ್ರಿ ಅಮಾವಾಸ್ಯೆ, ದ್ವಾಪರ ಯುಗಾದಿ, ಕಾರಿಂಜೆ ರಥ, ಹರಾವರಿ ಕೊಡಗತ್ತ್ಯಮ್ಮ ...ವ, ಕಾರಿಂಜೆ, ಕೆಳದಿ ರಥ, ಇರ್ಪು ಜಾತ್ರೆ, ಶೃಂಗೇರಿ ರಥ, ರಿಷಭ ತೀರ್ಥಂಕರ ಮೋಕ್ಷಕಲ್ಯಾಣ, ...ಬಸವಂತ ಶಿವಯೋಗಿ ರಥ, ಆದ್ಯಪಾಡಿ ಧ್ವಜ |
| ...ರಕ್ಷಣಾ ದಿನ, ಹೊನ್ನಗಿರಿ ಚೂರ್ಣೋತ್ಸವ, ಗೋಕರ್ಣ ರಥ, ಅರಗ ರಥ, ಪೊನ್ನಗಿರಿ, ಶಿವಮಂಗಲ ...ರೆಕಟ್ಟೆ ಜಾತ್ರೆ, ಕೆಳದಿ ರಾಮೇಶ್ವರ ರಥ, ಚಿಕ್ಕನಾಯಕನಹಳ್ಳಿದಬ್ಬಗುಂಟೆ ಪೂಜಾರ ತಮ್ಮಣ್ಣಯ್ಯ ಜಾತ್ರೆ, ...ಳ್ಳಿಅರಗ ಕಲಾನಾಥೇಶ್ವರ ರಥ, ಬೆಂ.ಚಾಮರಾಜಪೇಟೆ ರಾಮೇಶ್ವರ ರಥ, ಸಂತ ನಿಳೋಬ ಮಹಾರಾಜ ..., ಯಲಬುರ್ಗಾ । ಬಳಗೇರಿ ಬಸವೇಶ್ವರ ರಥ |
| ...ಪರಮಹಂಸ ಜಯಂತಿ, ರಾಷ್ಟ್ರೀಯ ಭದ್ರತಾ ದಿನ, ಉಚ್ಚಿಲ ಮಹಾಲಿಂಗೇಶ್ವರ ರಥ, ಕುಡ್ಲೂ... |

| ತಾ. | ತಿಥಿ | ವಿಶೇಷ ದಿವಸಗಳು |
|---|---|---|
| 11 | ನವಮಿ | ಚಂದ್ರಗುತ್ತಿ ರೇಣುಕಾಂಬ ರಥ, ಬರಿಮಾರು ಮಹಮ್ಮಾಯಿ ರಥ, ಪಿರಿಯಾಪಟ್ಟಣ ಕನ್ನಂಬಾಡಿ ಅಮ್ಮನವರ ರಥ, ಹಂಪಾಪುರ ರಥ, ಸಾಲಿಗ್ರಾಮ ದೊಡ್ಡಚಿಕ್ಕನಹಳ್ಳಿ ರಥ, ಶ್ರೀನಿವಾಸನಗರ ರಥೋತ್ಸವ, ಕೂಗ್ರೆಮಾಡ ರಥ, ಬಾಯಾರು ಉತ್ಸವ, ಬಲಿಮಾರು ಜಾತ್ರೆ, ರಾಮಾನುಜಾಚಾರ್ಯ ಪುಣ್ಯದಿನ, ನಂದೀಶ್ವರ ಅಷ್ಟಾಹ್ನಿಕ ಪರ್ವಾರಂಭ |
| 12 | ನವಮಿ | ದಂಡಿ ಯಾತ್ರಾ ದಿನ, ಕೆದಿಲ ಒಲೆಸಿರಿ, ಗುಬ್ಬಿ ಚನ್ನಬಸವೇಶ್ವರ ರಥ, ಅರಕಲಗೂಡುಕೇರಳಾಪುರ ವೀರಭದ್ರೇಶ್ವರ ರಥ, ಬೆಂ.ವಿಜಯನಗರ ಕೋದಂಡರಾಮ ರಥ |
| 13 | ದಶಮಿ | ನಂಜನಗೂಡು ಶ್ರೀಕಂಠಮುಡಿ ಉತ್ಸವ, ಕಾರಗುಂದ ಉತ್ಸವ, ಶಾಬನೂರು ರಥೋತ್ಸವ, ರಾಣೆಬೆನ್ನೂರು ಜಾತ್ರೆ, ಕಟ್ಟೆಗೆಹಳ್ಳಿ ರಥ, ಮಾವಿನಹೊಳೆ ರಥ, ಚಿತ್ರದುರ್ಗಾಹೊಸದುರ್ಗಾರಾಂಪುರ ಸದ್ಗುರು ಪರಪ್ಪಸ್ವಾಮಿ ರಥ, ನಾಗನೂರು ಕಾಶೀನಾಥ ಪುಣ್ಯದಿನ, ಉದಗಟ್ಟಿ ಶಂಕರಭಾರತೀ ಆರಾಧನೆ |
| 14 | ಏಕಾದಶಿ | ಸರ್ವತ್ರ ಏಕಾದಶಿ, ಅಮಲಕೀ ಏಕಾದಶಿ, ಮೇಲುಕೋಟೆ ವೈರಮುಡಿ ಉತ್ಸವ, ಅಲಂಕಾರು ದುರ್ಗಾಪರಮೇಶ್ವರಿ ಜಾತ್ರಾರಂಭ, ಮಲ್ಲಿಮಠ ಧ್ವಜ, ದೊಡ್ಡಬಳ್ಳಾಪುರತೂಬಗೆರೆ ಲಕ್ಷ್ಮೀವೆಂಕಟರಮಣ ಹನುಮಂತೋತ್ಸವ, ನಂಜನಗೂಡುಹೆಡತಲೆ ಮಾರಮ್ಮ ತಂಪಿನ ಪೂಜೆ, ಕೈವಲ್ಯಾದೇವಿ ಉತ್ಸವ, ಸತ್ಯಾಗಾಲ ವಿಶ್ವೇಶ್ವರ ರಥ, ಹರಪನಹಳ್ಳಿ ಪ್ರತಿಷ್ಠಾದಿನ |
| 15 | ದ್ವಾದಶಿ | ಮೀನ ಸಂಕ್ರಮಣ, ಪ್ರದೋಷ, ಅನಧ್ಯಯನ ದ್ವಯ, ವಿಶ್ವ ಗ್ರಾಹಕರ ದಿನ, ಮೈಸೂರುಹೆಬ್ಬಾಳು ಲಕ್ಷ್ಮೀಕಾಂತ... |

| ತಾ. | ತಿಥಿ | ವಿಶೇಷ ದಿ... |
|---|---|---|
| | | ಮುಕ್ತಾಯ, ಕತ್ತಲಸಾರು ಉತ್ಸವ, ಕೊಡದಗುಡ್ಡ ರಥ, ... ಆರಾಧನೆ, ಸವಣೂರು ಸತ್ಯಬೋಧತೀರ್ಥ ಆರಾಧನೆ |
| 19 | ಪಾಡ್ಯ | ಷಬ್-ಎ-ಬರಾತ್, ಮೇಲುಕೋಟೆ ಬ್ರಹ್ಮೋತ್ಸವಾರಂಭ, ... ಕರಿದಿನ, ಮೂಡಿಗೆರೆ, ಕರಿಘಟ್ಟ, ದೇವರಾಯನದುರ್ಗ ... ಶಿರಾತಡಕಲೂರು ಕದರೀನೃಸಿಂಹ ರಥ, ಭದ್ರಾವತಿಸು... ಚಂದ್ರಮೌಳೇಶ್ವರ ರಥ, ಚಿಕ್ಕಬಳ್ಳಾಪುರಬಾಗೇಪಲ್ಲಿಮಿಟ್ಟೇ... ತ್ಯಾಗತ್ತೂರು ಉತ್ಸವ |
| 20 | ಬಿದಿಗೆ | ಸಂತ ತುಕಾರಾಮ ಪುಣ್ಯದಿನ, ವಿಶ್ವ ಗುಬ್ಬಚ್ಚಿ ದಿನ, ಕಾರ... ಉತ್ಸವ, ಕೋಲಕಡಿ ಕಾಳಿಕಾಂಬಾ ಉತ್ಸವ, ಕಳಲೆ... ಶಂಕರಮಾಣಿಕಪ್ರಭು ಪುಣ್ಯದಿನ, ವಾದಿರಾಜ ಪುಣ್ಯದಿನ... ಪುಣ್ಯದಿನ, ಸಂತ ರಾಜಾರಾಮ ಜಯಂತಿ |
| 21 | ತದಿಗೆ | ಸಂಕಷ್ಟ ಚತುರ್ಥಿ(ಚಂ.ಉ ರಾ9:25), ಅಂತರರಾಷ್ಟ್ರೀ... ಕದನೂರು ಉತ್ಸವ, ಕಳಲೆ ಜಾತ್ರೆ, ನವವೃಂದಾವನ ವ್ಯಾಸ... |
| 22 | ಚೌತಿ | ರಂಗಪಂಚಮಿ, ವಿಶ್ವ ಜಲ ದಿನ, ಅಲಂಕಾರು ದುರ್ಗಾಪ... |

*"**Hanneradaneya Ratri**" - Kannada translation of Shakespeare's '**Twelfth Night**' by **P.V.Narayana**, Published by **Vasantha Prakashana**, No.10, Tulasivana, Bangalore-53*

ಪ್ರಥಮ ಮುದ್ರಣ : 2005

ಹಕ್ಕುಗಳು : ಅನುವಾದಕರದು

ಪುಟಗಳು : 118 + iv

ಮುಖ ಪುಟ : ಯು. ಟಿ. ಸುರೇಶ್

ಬೆಲೆ ರೂ. ೭೫/-

ಅಕ್ಷರ ಜೋಡಣೆ:
**ಶ್ರೀ ಲಕ್ಷ್ಮೀ ಎಂಟರ್‌ಪ್ರೈಸಸ್**
ನಂ.1052, ಮೊದಲ ಹಂತ
ಕುಮಾರಸ್ವಾಮಿ ಬಡಾವಣೆ
ಬೆಂಗಳೂರು – 560 078
ಮೊಬೈಲ್ : 9886255928

# ಪಾತ್ರಗಳು

| | | |
|---|---|---|
| ಆರ್ಸಿನೊ | ..... | ಇಲ್ಲೀರಿಯದ ಡ್ಯೂಕ್ |
| ಸೆಬಾಸ್ಟಿಯನ್ | ..... | ವಯೋಲಳ ಸೋದರ |
| ಆಂಟೋನಿಯೊ | ..... | ನೌಕಾಪಡೆಯ ಕ್ಯಾಪ್ಟನ್, ಸೆಬಾಸ್ಟಿಯನ್‌ನ ಸ್ನೇಹಿತ |
| ಮತ್ತೊಬ್ಬ ಕ್ಯಾಪ್ಟನ್ | ..... | ವಯೋಲಳ ಸ್ನೇಹಿತ |
| ವ್ಯಾಲೆಂಟೈನ್, ಕ್ಯೂರಿಯೋ | ..... | ಡ್ಯೂಕ್‌ನ ಪರಿವಾರದ ಸಂಭಾವಿತರು |
| ಸರ್ ಟೋಬಿ ಬೆಲ್ಚ್ | ..... | ಒಲಿವಿಯಳ ಸಂಬಂಧಿ |
| ಸರ್ ಆಂಡ್ರ್ಯೂ ಆಗ್ಯುಚೀಕ್ | ..... | ಸರ್ ಟೋಬಿಯ ಸ್ನೇಹಿತ |
| ಮಾಲ್ವೋಲಿಯೊ | ..... | ಒಲಿವಿಯಳ ಮನೆಯ ಪಾರುಪತ್ತೇದಾರ |
| ಫೇಬಿಯನ್ | ..... | ಒಲಿವಿಯಳ ಪರಿವಾರದ ಸಂಭಾವಿತ |
| ಫೆಸ್ಟ್ | ..... | ಒಲಿವಿಯಳ ನಕಲಿ |
| ಒಲಿವಿಯ | ..... | ಒಬ್ಬ ಶ್ರೀಮಂತ ಕೌಂಟೆಸ್ |
| ವಯೋಲ | ..... | ಡ್ಯೂಕ್‌ನನ್ನು ಪ್ರೀತಿಸುವ ಯುವತಿ |
| ಮರೀಯ | ..... | ಒಲಿವಿಯಳ ಪರಿಚಾರಿಕೆ (ಕುಳ್ಳು ಹೆಣ್ಣು) |

ಪ್ರತಿಷ್ಠಿತರು, ಪುರೋಹಿತರು, ನಾವಿಕರು, ರಕ್ಷಕ ಅಧಿಕಾರಿಗಳು

ಸಂಗೀತಗಾರರು ಮತ್ತು ಇತರ ಸೇವಕರು

ಸ್ಥಳ : ಇಲ್ಲೀರಿಯ

ಮೊದಲನೇ ಅಂಕ

## ದೃಶ್ಯ ಒಂದು

ಡ್ಯೂಕ್‌ನ ಅರಮನೆಯಲ್ಲಿ ಒಂದು ಕೋಣೆ.

(ಡ್ಯೂಕ್ ಆರ್ಸಿನೋ ಕ್ಯೂರಿಯೋ ಮತ್ತು ಸಾಮಂತರು ಸಂಗೀತ ಕೇಳುತ್ತಿದ್ದಾರೆ : ಸಂಗೀತ ನಿಲ್ಲುತ್ತದೆ.)

ಡ್ಯೂಕ್ : ಸಂಗೀತವು ಪ್ರೇಮದ ಆಹಾರವಾದರೆ,
ಮುಂದುವರೆಸಿ, ನನಗದನ್ನು ಅತಿಯಾಗಿ ನೀಡಿ ;
ಅದರಿಂದ ಕಟರೆಯಾಗಿ, ಹಸಿವು ಇಂಗಿ ಸಾಯಲಿ.
ಮತ್ತದೇ ನಾದ! ಅದರದು ಸಾವಿನಂತಹ ಮುಕ್ತಾಯ :
ವಯೊಲೆಟ್ ಹೂಗಳ ದಿಣ್ಣೆಯ ಮೇಲೆ ಕಳ್ಳತನದಿಂದ
ಕಂಪುಸೂಸಿ ಉಸಿರಾಡುವ ದಕ್ಷಿಣದ ಗಾಳಿಯಂತೆ
ನನ್ನ ಕಿವಿಗದು ಬಿತ್ತು. (ಮತ್ತೆ ಸಂಗೀತ) ಸಾಕು, ಇನ್ನು ಬೇಡ!
ಹಿಂದೆ ಮಧುರವಾಗಿದ್ದಷ್ಟು ಅದು ಈಗಿಲ್ಲ.
ಓ ಪ್ರೇಮಸತ್ವವೇ, ನೀನೆಷ್ಟು ಶೀಘ್ರ ಹಾಗೂ ತಾಜಾ!
ಶಕ್ತಿಮೀರಿ ನೀನು ಸಮುದ್ರದಂತೆಲ್ಲವನ್ನೂ ಸ್ವೀಕರಿಸುತ್ತೀ,
ಮತ್ತೇನೂ ನುಸುಳಲಾರದು ಅಲ್ಲಿ. ಇದರ ಎದುರು
ಎಂಥ ಬೆಲೆ – ಎತ್ತರಗಳಿರುವ ವಸ್ತುವೂ ಕ್ಷಣದಲ್ಲಿ
ಅಗ್ಗ, ಕುಳ್ಳು. ಪ್ರೇಮಕ್ಕೆಷ್ಟೊಂದು ರೂಪಗಳು, ಅದೊಂದು
ಮಾತ್ರವೇ ಅಷ್ಟು ಅದ್ಭುತರಮ್ಯ!

ಕ್ಯೂರಿಯೊ : ಬೇಟೆಗೆ ಹೊರಡುವಿರಾ, ಪ್ರಭು ?

ಡ್ಯೂಕ್ : ಏನೆಂದೆ, ಕ್ಯೂರಿಯೋ ?

ಕ್ಯೂರಿಯೊ : ಅದೇ ಜಿಂಕೆ....

ಡ್ಯೂಕ್ : ಏಕೆ, ಹೌದು ಅದೇ ನನಗೀಗ ಅತ್ಯಂತ ಶ್ರೇಷ್ಠ;
ಓ ನನ್ನ ಕಣ್ಣುಗಳು ಒಲಿವಿಯಳನ್ನು ಮೊದಲು ಕಂಡಾಗ
ನನಗನ್ನಿಸಿತು : ಅವಳು ಗಾಳಿಯನ್ನು ವಿಷಾಣುಗಳಿಂದ
ಶುಭ್ರಗೊಳಿಸಿದಳೆಂದು ; ಆ ಕ್ಷಣವೆ ನಾನಾದೆ ಜಿಂಕೆ.

ಆಗಿನಿಂದಲೂ ಆಸೆಗಳು ಭಯಂಕರ
ಬೇಟೆ ನಾಯಿಗಳಂತೆ ನನ್ನ ಬೆನ್ನಟ್ಟುತ್ತಿವೆ.
(ವ್ಯಾಲೆಂಟೈನ್ ಬರುತ್ತಾನೆ).
ಏನು ಸಮಾಚಾರ ? ಅವಳ ಸುದ್ದಿಯೇನು ?

ವ್ಯಾಲೆಂಟೈನ್ : ಕ್ಷಮಿಸಿ ಪ್ರಭು, ನನಗವರ ದರ್ಶನವೆ ಸಿಗಲಿಲ್ಲ,
ಆದರೆ ಸೇವಕಿಯ ಮೂಲಕ ಹೀಗೆ ಉತ್ತರಿಸಿದರು :
ಏಳು ವರ್ಷಗಳ ಕಾಲ ಆಕಾಶವೂ ಕೂಡ
ಅವರ ಮುಖವನ್ನು ಸರಿಯಾಗಿ ನೋಡಲಾರವು ;
ಸನ್ಯಾಸಿನಿಯಂತೆ ಮುಖಕ್ಕೆ ಮುಸುಕು ಹಾಕಿಕೊಳ್ಳುತ್ತಾರೆ,
ತಮ್ಮ ಕೋಣೆಯಲಿ ಸುತ್ತುತ್ತ ಕಣ್ಣ ನೋಯಿಸಿ ಸುರಿವ
ಕಣ್ಣೀರಿಂದ ಅದನ್ನ ನೆನೆಸುತ್ತಾರೆ. ಇಷ್ಟೆಲ್ಲವೂ ಸತ್ತ
ತಮ್ಮ ಪ್ರಿಯ ಸೋದರನ ನೆನಪಿಗಾಗಿ.
ಹೀಗೆ ಅವರನ್ನು ತಮ್ಮ ದುಃಖಪೂರಿತ ನೆನಪಿನಲ್ಲಿ
ಹಸಿರಾಗಿಯೂ ಚಿರವಾಗಿಯೂ ಉಳಿಸುತ್ತಾರಂತೆ.

ಡ್ಯೂಕ್ : ಸೋದರನಿಗಾಗಿ ಇಷ್ಟೆಲ್ಲ ಪ್ರೇಮ ಋಣವನ್ನು
ಸಲ್ಲಿಸುವ ಅವಳ ಹೃದಯವೆಷ್ಟು ಸುಂದರ !
ಮನ್ಮಥನು ತನ್ನ ಚಿನ್ನದ ಬಾಣದಿಂದ
ಅಲ್ಲಿನ ಇತರ ಪ್ರೀತಿಯನ್ನೆಲ್ಲ ತೊಡೆದಾಗ,
ಪ್ರೇಮಸಾಮ್ರಾಜ್ಯ ಸಿಂಹಾಸನಗಳಾದ ಅವಳ
ಯಕೃತ್ತು ಮೆದುಳು ಹೃದಯಗಳಲ್ಲೆಲ್ಲ
ತಾನೇ ತಾನಾಗಿ ತುಂಬಿಕೊಂಡಾಗ, ತನ್ನೆದೆಯ
ದೊರೆಯನ್ನವಳು ಇನ್ನೆಷ್ಟು ಪ್ರೇಮಿಸಬಹುದು !
ಮಧುರ ಹೂ ಹಾಸಿಗೆಗೆ ನೀವೀಗ ಹೊರಡಿ.
ಬಳ್ಳಿ ಮನೆಗಳ ತಂಪಿನಲ್ಲಿ ಪ್ರೇಮಭಾವನೆಗಳು
ತುಂಬ ಶ್ರೀಮಂತವಾಗಿ ನಿದ್ರಿಸುತ್ತವೆ.

(ಅವರು ಹೋಗುತ್ತಾರೆ)

# ದೃಶ್ಯ ಎರಡು

ಸಮುದ್ರ ದಂಡೆಯ ಬಳಿ

(ವಯೋಲ, ಕ್ಯಾಪ್ಟನ್ ಮತ್ತು ನಾವಿಕರು)

ವಯೋಲ: ಗೆಳೆಯರೇ, ಇದಾವ ದೇಶ ?

ಕ್ಯಾಪ್ಟನ್ : ಇದು ಇಲ್ಲೀರಿಯ ದೇಶ, ತಾಯಿ.

ವಯೋಲ: ಇಲ್ಲೀರಿಯದಲ್ಲಿ ನಾನು ಮಾಡುವುದೇನು ?
ನನ್ನ ಅಣ್ಣ ಎಲಿಸಿಯಂನಲ್ಲಿದ್ದಾನೆ. ಬಹುಶಃ
ಅವನು ಮುಳುಗಿಲ್ಲ; ನಿಮಗನ್ನಿಸುವುದೇನು, ನಾವಿಕರೆ ?

ಕ್ಯಾಪ್ಟನ್ : ನೀವು ಬದುಕಿದ್ದು ಕೂಡ ಆಕಸ್ಮಿಕವೇ.

ವಯೋಲ: ಓ ಬಡಪಾಯಿ ಅಣ್ಣ; ಆಕಸ್ಮಿಕವಾಗಿ ಅವನೂ ಉಳಿದಿರಲಿ.

ಕ್ಯಾಪ್ಟನ್ : ಹೌದಮ್ಮ. ಆಕಸ್ಮಿಕದ ಮಾತಿಂದ ಸಮಾಧಾನ ಮಾಡಿದರೆ
ಅದೇ ದೃಢವೆಂದು ನಂಬಿ ನೀವು : ನಮ್ಮ ಹಡಗು ಒಡೆದಾಗ
ನೀವು, ಮತ್ತಿತರ ಬದುಕುಳಿದ ಬಡಪಾಯಿಗಳು,
ನಮ್ಮ ಮುಳುಗು ದೋಣಿಗೇ ಜೋತಿರುವಾಗ
ನಾನು ನಿಮ್ಮ ಅಣ್ಣನವರನ್ನ ಕಂಡೆ : ಆ ಕಷ್ಟದಲ್ಲೂ
ಧೈರ್ಯಭರವಸೆಗಳು ಕಲಿಸಿದ್ದ ಚಾಲೂಕಿನಿಂದ
ಸಮುದ್ರದಲ್ಲಿ ತೇಲುತ್ತಿದ್ದ ತೊಲೆಯೊಂದನ್ನು ಹಿಡಿದು,
ಡಾಲ್ಫಿನ್‌ಳ ಮೇಲೆ ಕುಳಿತ ಆರಿಯೋನ್‌ನಂತೆ,
ಅಲೆಗಳೊಡನೆ ಸಲೀಸಾಗಿ ಹೊಂದಿಕೊಂಡಿರುವುದನ್ನು
ನನ್ನ ಕಣ್ಣಿಗೆ ಬೀಳುವವರೆಗೂ ನೋಡಿದೆ.

ವಯೋಲ: ಹೀಗೆ ಹೇಳಿದ್ದಕ್ಕೆ, ಇದೋ ಹಣದ ಬಹುಮಾನ ;
ನಾನು ಬದುಕಿ ಉಳಿದದ್ದೆ ಭರವಸೆಯನ್ನಿತ್ತಿದೆ,
ನಿಮ್ಮ ಮಾತುಗಳು ಅದನ್ನಿನ್ನಷ್ಟು ಬಲಗೊಳಿಸಿವೆ,
ಅಣ್ಣನೂ ಈ ರೀತಿಯೇ ಉಳಿದಿರಬಹುದೆಂಬುದನ್ನ,
ನಿಮಗೆ ಈ ದೇಶ ಗೊತ್ತೆ ?

ಕ್ಯಾಪ್ಟನ್ : ಚೆನ್ನಾಗಿ ಗೊತ್ತು. ನಾನು ಹುಟ್ಟಿ ಬೆಳೆದ ಊರು
ಇಲ್ಲಿಗೆ ಮೂರು ಗಂಟೆಯ ಪ್ರಯಾಣದಷ್ಟೂ ದೂರವಿಲ್ಲ.

ವಯೋಲ : ಇದನ್ನಾಳುವವರಾರು ?

ಕ್ಯಾಪ್ಟನ್ : ಸ್ವಭಾವ — ಹೆಸರುಗಳೆರಡರಲ್ಲೂ ಉದಾತ್ತನಾದೊಬ್ಬ ಡ್ಯೂಕ್.

ವಯೋಲ : ಅವರ ಹೆಸರೇನು ?

ಕ್ಯಾಪ್ಟನ್ : ಆರ್ಸಿನೋ.

ವಯೋಲ : ಆರ್ಸಿನೋ ? ನನ್ನ ತಂದೆ ಆ ಹೆಸರು ಹೇಳಿದ್ದನ್ನ
ನಾನು ಕೇಳಿದ್ದೇನೆ. ಆಗ ಅವರಿನ್ನೂ ಬ್ರಹ್ಮಚಾರಿ.

ಕ್ಯಾಪ್ಟನ್ : ಈಗಲೂ ಅಷ್ಟೆ, ಅಥವಾ ಇತ್ತೀಚಿನವರೆಗೂ.
ಒಂದು ತಿಂಗಳ ಹಿಂದಷ್ಟೇ ಅಲ್ಲಿಗೆ ಹೋಗಿದ್ದೆ
ಆಗ ವದಂತಿಯೊಂದು ಹೊಸದಾಗಿ ಹಬ್ಬಿತ್ತು –
ಗೊತ್ತೇ ಇದೆಯಲ್ಲ, ದೊಡ್ಡವರ ಬಗ್ಗೆ ಸಣ್ಣವರ ಮಾತು –
ಅವರು ಒಲಿವಿಯಳನ್ನು ಪ್ರೇಮಿಸುವರಂತೆ.

ವಯೋಲ : ಯಾರಾಕೆ ?

ಕ್ಯಾಪ್ಟನ್ : ಆಕೆಯೊಬ್ಬ ಸಭ್ಯಕನ್ಯೆ. ಹನ್ನೆರಡು ತಿಂಗಳ ಹಿಂದೆ
ಸತ್ತ ಒಬ್ಬ ಕೌಂಟ್‌ನ ಮಗಳಾಕೆ. ಆಮೇಲೆ ಅಣ್ಣನ
ರಕ್ಷಣೆಯಲ್ಲಿದ್ದಳು ; ಆತನೂ ಈಚೆಗೆ ಸತ್ತ.
ಅವನ ಮೇಲಣ ಪ್ರೀತಿಯಿಂದಾಗಿ ಆಗಿನಿಂದ
ಜನರ ಭೇಟಿಯಾಗುವುದನ್ನೂ ಆಕೆ ಬಿಟ್ಟಿರುವಳಂತೆ.

ವಯೋಲ : ಓ ನಾನಾಕೆಯ ಸೇವೆ ಮಾಡುತ್ತ,
ಪಕ್ವಕಾಲವುಂಟಾಗುವವರೆಗೂ ನಾನಾರೆಂದು
ಯಾರಿಗೂ ತೋರಿಸಿಕೊಳ್ಳದೆ ಇರುವಂತಿದ್ದರೆ...

ಕ್ಯಾಪ್ಟನ್ : ಹಾಗೆ ಮಾಡುವುದು ಕಷ್ಟ, ಏಕೆಂದರೆ
ಯಾರ ಪ್ರಾರ್ಥನೆಯನ್ನೂ ಅವರು ಒಪ್ಪುವುದಿಲ್ಲ,
ಡ್ಯೂಕ್‌ರದು ಕೂಡ.

ವಯೋಲ : ನಿಮ್ಮ ನಡತೆ ತುಂಬ ಸಭ್ಯವಾಗಿದೆ, ಕ್ಯಾಪ್ಟನ್.
ಎಷ್ಟೋ ವೇಳೆ ಸುಂದರ ಗೋಡೆಗಳ ಹಿಂದೆ
ಪ್ರಕೃತಿ ಅಸಹ್ಯವನ್ನು ತುಂಬಿರುತ್ತದೆ ; ಆದರೆ
ನಿಮ್ಮ ಮನಸ್ಸು ನಿಮ್ಮ ಸುಂದರವಾದ
ಹೊರರೂಪದಂತೆಯೇ ಇದೆಯೆಂದು ನಂಬುತ್ತೇನೆ.
ನನ್ನದೊಂದು ಪ್ರಾರ್ಥನೆ– ಅದಕ್ಕಾಗಿ ನಿಮಗೆ ದೊಡ್ಡ ಬಹುಮಾನ.
ನನಗೆ ಮಾರುವೇಷವ ಹಾಕಿ, ನನ್ನ ಸಹಾಯಕರಾಗಿ
ನನ್ನ ಉದ್ದೇಶ ಸಾಧನೆಗೆ ನೆರವಾಗಿ. ಆ ಡ್ಯೂಕರಿಗೆ
ನಾನು ಸೇವಕಿಯಾಗುತ್ತೇನೆ : ಖೋಜಾ ಎಂದು
ಅವರಿಗೆ ನನ್ನ ಕಾಣಿಕೆಯಾಗಿ ನೀಡಿ.
ನಿಮಗೂ ಇದು ಯೋಗ್ಯವೆಂದೆನಿಸೀತು : ನಾನು ಹಾಡಬಲ್ಲೆ,
ಅವರೊಡನೆ ನಾನಾ ಗಾನರೂಪಗಳಿಂದ ಮಾತಾಡಬಲ್ಲೇ
ಅದು ಅವರಿಗೆ ಮೆಚ್ಚಿಕೆಯಾಗಬಹುದು.
ಮುಂದೆ ಒದಗಿದ್ದನ್ನು ಎದುರಿಸುತ್ತೇನೆ ನಾನು.
ಆದರೆ ನನ್ನ ಚಾತುರ್ಯಕ್ಕೆ ಮೌನದಿಂದಲೇ ನೆರವಾಗಿ.

ಕ್ಯಾಪ್ಟನ್ : ನೀವು ಅವರ ಬಳಿ ಖೋಜಾ ಆಗಿ,
ನಾನು ನಿಮ್ಮ ಮೂಕ ಸೇವಕನಾಗುತ್ತಾನೆ.
ನನ್ನ ನಾಲಗೆಯುಬ್ಬಿದರೆ, ಕಣ್ಣು ಇಂಗಿಹೋಗಲಿ.

ವಯೋಲ : ವಂದನೆಗಳು ಹಾಗಾದರೆ ಕರೆದೊಯ್ಯಿರಿ ನನ್ನ.

## ದೃಶ್ಯ ಮೂರು

ಒಲಿವಿಯಳ ಮನೆಯ ಒಂದು ಕೋಣೆ

(ಸರ್ ಟೋಬಿ ಬೆಲ್ಚ್ ಮದ್ಯವನ್ನು ಮುಂದಿಟ್ಟುಕೊಂಡು ಕುಳಿತಿದ್ದಾನೆ ; ಜೊತೆಗೆ ಮರೀಯ)

ಸರ್ ಟೋಬಿ : ಅಣ್ಣನ ಸಾವಿನಿಂದ ಹೀಗಾಗಲು ನನ್ನ ಸೊಸೆಗೇನು ಭೂತ ಹಿಡಿದಿದೆಯೋ ನಾ ಬೇರೆ ಕಾಣೆ. ಚಿಂತೆ ಅನ್ನೋದು ಜೀವನದ ಶತ್ರು ಅನ್ನೋದು ಖಂಡಿತ.

ಮರೀಯ: ನಿಜ ಹೇಳ್ತೀನಿ, ಸರ್ ಟೋಬಿ, ನೀವು ರಾತ್ರೀ ಹೊತ್ತು ಇನ್ನೊಂದು ಸ್ವಲ್ಪ ಬೇಗ ಬರ್ಬೇಕು. ನಿಮ್ಮ ಸೊಸೆ, ನಮ್ಮ ಒಡತೀಗೆ ನೀವು ಈ ಅವೇಳೇಲೀ ಬರೋದು ಸರಿ ಹೋಗೋಲ್ಲ, ಬೇಸರ ಅವರಿಗೆ.

ಸರ್ ಟೋಬಿ: ಆಗಲಿ, ಬೇಸರ ಆಗೋವರೆಗೂ ಬೇಸರ ಮಾಡ್ಕೊಳ್ಳಲಿ.

ಮರೀಯ: ಅದು ಸರಿ. ಆದರೆ ನೀವು ಮರ್ಯಾದೆಗೆ ತಕ್ಕ ಹಾಗೆ ಬಟ್ಟೆ ಧರಿಸಬೇಕು.

ಸರ್ ಟೋಬಿ: ಬಟ್ಟೆ? ಈಗಿಗಿಂತ ಒಳ್ಳೆ ಬಟ್ಟೆ ಹಾಕಿಕೊಳ್ಳೋಕೆ ನಂಗೆ ಸಾಧ್ಯವಿಲ್ಲ. ಈ ಬಟ್ಟೆ ಕುಡಿಯೋದಕ್ಕೆ ತಕ್ಕದ್ದು, ನನ್ನ ಬೂಟುಗಳೂ ಹಾಗೇನೇ. ಇದು ಬೇರೆಯೋರಿಗೆ ಸರಿಹೋಗದಿದ್ದರೆ, ಅವರು ಅದನ್ನೆಲ್ಲ ತಮ್ಮ ಸೊಂಟಪಟ್ಟೀಗೆ ನೇತುಹಾಕಿಕೊಳ್ಳಲಿ.

ಮರೀಯ: ಹೀಗೆ ಅತಿಯಾಗಿ ಕುಡಿಯೋದ್ರಿಂದ ನಿಮಗೇ ತೊಂದರೆ ನಮ್ಮ ಒಡತಿ ನಿನ್ನೆ ಇದರ ಬಗ್ಗೆ ಹೇಳ್ತಾ ಇದ್ದದ್ದನ್ನು ಕೇಳಿದೆ. ಅವರನ್ನು ಒಲಿಸೋದಕ್ಕೆ ಅಂತ ನೀವೊಬ್ಬ ನೈಟ್‌ನ ಕರ್ರುಕೊಂಡು ಬಂದ ವಿಷಯಾನೂ ಹೇಳ್ತಾ ಇದ್ರು.

ಸರ್ ಟೋಬಿ: ಯಾರು ? ಸರ್ ಆಂಡ್ರ್ಯೂ ಆಗ್ಯುಚೀಕ್‌ನ ವಿಷಯಾನಾ ?

ಮರೀಯ: ಹೌದು, ಅವನ ವಿಷಯಾನೇ.

ಸರ್ ಟೋಬಿ: ಅವನು ಇಲ್ಲೀರಿಯದ ಯಾರಿಗೂ ಸಮ.

ಮರೀಯ: ಅದನ್ನೀಗ ಯಾಕೆ ಹೇಳ್ತಾ ಇದೀರಿ ?

ಸರ್ ಟೋಬಿ: ಯಾಕೇಂದ್ರೆ ? ಅವನಿಗೆ ವರ್ಷಕ್ಕೆ ಮೂರು ಸಾವಿರ ಡ್ಯೂಕಾಟ್‌ಗಳಷ್ಟು ಆದಾಯ ಇದೆ.

ಮರೀಯ: ಆದರೆ ಕೊನೆಗೆ ಅವನಿಗೆ ಉಳಿಯೋದು ಬರೀ ವರ್ಷ ಅಷ್ಟೆ. ಅವನೊಬ್ಬ ಪೆದ್ದ, ದುಂದುಗಾರ.

ಸರ್ ಟೋಬಿ: ಛೆ, ಛೆ, ನೀನೂ ಹೀಗೆ ಹೇಳೋದೊಂದ್ರೆ ! ಅವನಿಗೆ ಪಿಟೀಲು ಬಾರಿಸೋಕೆ ಬರತ್ತೆ. ಮೂರೋ ನಾಲ್ಕೋ ಭಾಷೇನ ಅಭ್ಯಾಸ ಮಾಡ್ದೇನೆ ಮಾತಾಡೋದನ್ನ ಕಲ್ತಿದಾನೆ. ಪ್ರಕೃತಿಯ ಎಲ್ಲ ಒಳ್ಳೆ ಅಂಶಗಳೂ ಅವನಲ್ಲಿವೆ.

ಮರೀಯ: ಇವೆ ನಿಜ. ಎಲ್ಲವೂ ಪ್ರಕೃತಿದತ್ತವೇ ! ಆದರೆ ಅವನೊಬ್ಬ ದಡ್ಡ, ಜೊತೆಗೆ ಜಗಳಗಂಟ. ಅವನ ಜಗಳಗಂಟತನದ ಚಪಲ ಕಡಿಮೆ ಮಾಡೋಕೆ ಹೇಡಿತನ ಬೇರೆ ಅಂಟಕೊಂಡಿದೆ. ಅವನಿಗೆ ಬೇಗನೆ ಸಮಾಧಿ ಸಿದ್ಧಿಸುತ್ತೇಂತ ತಿಳಿದೋರೆಲ್ಲ ಹೇಳ್ತಾ ಇದಾರೆ.

ಸರ್ ಟೋಬಿ: ಹಾಗೆ ಹೇಳೋರು ನೀಚರು, ಮಾನ ಕಳೆಯೋ ಉದ್ದೇಶದ ಜನ.

ಮರೀಯ: ಅಷ್ಟೇ ಅಲ್ಲ, ರಾತ್ರಿಯೆಲ್ಲ ನಿಮ್ಮ ಜೊತೆ ಕುಡಿದು ಬಿದ್ದಿರ್ತಾನೇಂತ ಕೂಡ ಹೇಳ್ತಾರೆ.

ಸರ್ ಟೋಬಿ: ಒಲಿವಿಯಳಿಗೆ ಒಳ್ಳೇದು ಹಾರೈಸಿ ಕುಡೀತಾನೆ, ಅಷ್ಟೆ. ನಾನಂತೂ ನನ್ನ ಗಂಟಲನಾಳ ಇರೋವರೆಗೂ, ಇಲ್ಲೀರಿಯಾದಲ್ಲಿ ಹೆಂಡ ಇರೋವರೆಗೂ ಅವಳಿಗೆ ಒಳ್ಳೇದು ಹಾರೈಸಿ ಕುಡೀತೀನಿ. ಚರ್ಚಿನ ಗೋಪುರ ತಿರುಗ್‌ತಿರೋ ಹಾಗೆ ಕಾಣುವವರೆಗೂ ಅವಳಿಗೆ ಶುಭಕೋರಿ ಕುಡೀದೆ ಇರೋನು ಹೇಡಿ, ನೀಚ. (ಅವನು ಅವಳ ಸೊಂಟವನ್ನು ಬಳಸಿ ಹಿಡಿದುಕೊಳ್ಳುತ್ತಾನೆ ; ಅವರು ಒಂದು ಸುತ್ತು ನರ್ತಿಸುತ್ತಾರೆ.) ಏನೆಂದೆ ಸೊಟ್ಟ ಮುದ್ದಕ್ಕ ? ಸರ್ ಆಂಡ್ರೂ ಆಗ್ಯುಫೇಸ್ ಅಗೋ ದಯಮಾಡಿಸ್ತಿದಾರೆ.

(ಸರ್ ಆಂಡ್ರ್ಯೂ ಆಗ್ಯುಚೀಕ್ ಬರುತ್ತಾನೆ)

ಸರ್ ಆಂಡ್ರ್ಯೂ: ಸರ್ ಟೋಬಿ ಬೆಲ್ಚ್! ಏನು ಸಮಾಚಾರ ?

ಸರ್ ಟೋಬಿ: ನನ್ನ ಮುದ್ದು ಸರ್ ಆಂಡ್ರ್ಯೂ !

ಸರ್ ಆಂಡ್ರ್ಯೂ: ಒಳ್ಳೇದಾಗಲಿ, ಚಂಡಿ ಚನ್ನಮ್ಮ.

ಮರೀಯ: (ಅಣಕದಿಂದ ನಮಸ್ಕರಿಸುತ್ತ) ನಿಮಗೂ ಹಾಗೇ ಆಗಲಿ ಸ್ವಾಮಿ.

ಸರ್ ಟೋಬಿ: ಮಾತಾಡಿಸು, ಸರ್ ಆಂಡ್ರ್ಯೂ ಮಾತಾಡಿಸು.

ಸರ್ ಆಂಡ್ರ್ಯೂ: ಇವಳು ಯಾರು ?

ಸರ್ ಟೋಬಿ: ನನ್ನ ಸೊಸೆಯ ಪರಿಚಾರಕಿ.

ಸರ್ ಆಂಡ್ರ್ಯೂ: ಮಾತಾಡಿಸಮ್ಮನೋರೆ, ನಮ್ಮ ಪರಿಚಯ ಹೆಚ್ಚಾಗಬೇಕೂಂತ ನನ್ನಾಸೆ.

ಮರೀಯ: ನನ್ನ ಹೆಸರು ಮೇರಿ, ಸ್ವಾಮಿ.

ಸರ್ ಆಂಡ್ರ್ಯೂ: ಶ್ರೀಮತಿ ಮೇರಿ ಮಾತಾಡಿಸಮ್ಮನೋರೆ —

ಸರ್ ಟೋಬಿ: (ಮೆಲ್ಲಗೆ) ತಪ್ಪು ತಿಳುಕೊಂಡೆಯಲ್ಲ ನೈಟ್ : ಮಾತಾಡಿಸು ಅಂದರೆ ಅವಳ ಎದುರಿಗೆ ನಿಂತು ಪರಿಚಯ ಮಾಡ್ಕೋ, ಪ್ರೀತಿ ತೋರಿಸು, ಪೀಡಿಸು ಅಂತ.

ಸರ್ ಆಂಡ್ರ್ಯೂ: ನಿಜವಾಗಿ ಎಲ್ಲರ ಎದುರಿಗೆ ನಾನಿವಳ ಜೊತೆ ಸೇರಲಾರೆ. 'ಮಾತಾಡಿಸು' ಅಂದರೆ ಇದೇ ಏನು ಅರ್ಥ ?

ಮರೀಯ: ನಮಸ್ಕಾರ, ಸ್ವಾಮಿ ಬರ್ತೀನಿ (ಹೋಗಲು ತಿರುಗುತ್ತಾಳೆ).

ಸರ್ ಟೋಬಿ: (ಮೆಲ್ಲಗೆ) ಅವಳು ಹೀಗೆ ಹೋಗೋದಕ್ಕೆ ನೀನು ಬಿಟ್ಟರೆ, ನಿನ್ನ ಕತ್ತಿ ಹಿರಿಯೋಕೆ ಇನ್ನು ಅವಕಾಶವೇ ಸಿಕ್ಕಲಾರದು.

ಸರ್ ಆಂಡ್ರ್ಯೂ: ಏನಮ್ಮ, ನೀವು ಹೀಗೆ ಹೋಗಿಬಿಟ್ಟರೆ ನಂಗೆ ಕತ್ತಿ ಹಿರಿಯೋಕೆ ಮತ್ತೆ ಅವಕಾಶವೇ ಸಿಕ್ಕಲಾರದು. ಸುಂದರಿ, ನಿಮ್ಮ ಕೈಲಿ ಮೂರ್ಖರು ಸಿಕ್ಕಿ ಹಾಕಿಕೊಂಡಿದ್ದಾರೆ ಅಂತ ಅಂದುಕೊಂಡ್ರಾ ?

ಮರೀಯ: ನಾನೇನೂ ನಿಮ್ಮ ಕೈ ಹಿಡಿದು ಬಲವಂತವಾಗಿ ನಿಲ್ಲಿಸಿಕೊಂಡಿಲ್ಲವಲ್ಲ.

ಸರ್ ಆಂಡ್ರ್ಯೂ: ಪರವಾಗಿಲ್ಲ ಕೈ ಹಿಡುಕೊಳ್ಳಿ, ಇಗೋ ನನ್ನ ಕೈ. (ಕೈ ನೀಡುತ್ತಾನೆ).

ಮರೀಯ: (ಕೈ ಹಿಡಿದುಕೊಂಡು) ಈಗ ಸ್ವಾಮಿ, ''ಆಲೋಚನೆ ಸ್ವತಂತ್ರವಾಗಿದೆ''. (ಅವನ ಅಂಗೈ ನೋಡಿ) ದಯವಿಟ್ಟು ನಿಮ್ಮ ಕೈಯನ್ನು ಕುಡಿಯೋ ಮನೆಗೆ ಕರೆದುಕೊಂಡು ಹೋಗಿ ಸ್ವಲ್ಪ ಕುಡಿಸಿ.

ಸರ್ ಆಂಡ್ರ್ಯೂ: ಎಲ್ಲಿಗೆ ಅಂದ್ರಿ, ಪ್ರಿಯೆ ? ನಿಮ್ಮ ಅಲಂಕಾರದ ಮಾತಿನ ಅರ್ಥ ಏನು?

ಮರೀಯ: ಅದು ಒಣಗಿಹೋಗಿದೆ.

ಸರ್ ಆಂಡ್ರ್ಯೂ: ನನಗೂ ಹಾಗೇ ಅನ್ನಿಸುತ್ತೆ ; ನಾನೇನೂ ಕತ್ತೆಯಲ್ಲ, ನನ್ನ ಕೈಯನ್ನು ಒಣಗಿದಂತೆ ಇಟ್ಟುಕೊಂಡಿರಬಲ್ಲೆ. ನಿಮ್ಮ ತಮಾಷೆ ಏನು ?

ಮರೀಯ: ಒಣಗಿದ ತಮಾಷೆ, ಸ್ವಾಮಿ.

ಸರ್ ಆಂಡ್ರ್ಯೂ: ನಿಮ್ಮ ಹತ್ರ ಅವು ತುಂಬಿಕೊಂಡಿವೆಯೇನು?

ಮರೀಯ: ಹೌದು ಸ್ವಾಮಿ, ಅವು ನನ್ನ ಬೆರಳ ತುದೀಲೇ ಇವೆ. ಈಗ ನಾನು ನಿಮ್ಮ ಕೈ ಬಿಡ್ತೇನೆ, ಈಗ ಬರಡಾದೆ. (ಅವನ ಕೈ ಬಿಟ್ಟು ನಮಸ್ಕಾರ ಮಾಡಿ ಹೋಗುತ್ತಾಳೆ).

ಸರ್ ಟೋಬಿ: (ಕುಳಿತುಕೊಂಡು) ಅಯ್ಯೋ ನೈಟ್, ನಿಂಗೆ ಒಂದು ಬಟ್ಟಲು ಸಾರಾಯಿ ಬೇಕಾಗಿದೇಂತ ಕಾಣತ್ತೆ. ನೀನು ಹೀಗೆ ಮೀಸೆ ಮಣ್ಣು ಮಾಡಿಕೊಂಡಿದ್ದನ್ನು ನಾನೆಂದು ನೋಡಿದ್ದೆ?

ಸರ್ ಆಂಡ್ರ್ಯೂ: ಎಂದೂ ಇಲ್ಲ, ಸಾರಾಯಿ ನನ್ನನ್ನು ಉರುಳಿಸಿದ ಸಂದರ್ಭ ಬಿಟ್ಟು. (ಅವನ ಪಕ್ಕದಲ್ಲಿ ಕುಳಿತು) ನನಗೆ ಕೆಲವು ಸಲ ಅನ್ನಿಸತ್ತೆ, ಒಬ್ಬ ಕ್ರಿಶ್ಚಿಯನ್‌ಗಿಂತಾಗಲೀ ಬೇರೆ ಸಾಮಾನ್ಯ ಮನುಷ್ಯನಿಗಿಂತಾಗಲೀ ಹೆಚ್ಚು ಮಾತಿನ ಜಾಣ್ಮೆ ನನಗಿಲ್ಲ ಅಂತ. ಆದರೆ ನಾನು ವಿಪರೀ,ತ ಹಸುಮಾಂಸ ತಿನ್ನೋದರಿಂದ ನನ್ನ ಮಾತಿನ ಜಾಣ್ಮೆಗೆ ತೊಂದರೆಯಾಗುತ್ತೇನೋ ಅಂತಾನೂ ಅನ್ನಿಸತ್ತೆ.

ಸರ್ ಟೋಬಿ: ಇರಬಹುದೇನೋ.

ಸರ್ ಆಂಡ್ರ್ಯೂ: ಹಾಗಂತ ಗೊತ್ತಾಗಿದ್ದಿದ್ರೆ ನಾನದನ್ನು ಬಿಟ್ಟುಬಿಡ್ತಿದ್ದೆ. ಸರ್ ಟೋಬಿ ನಾನು ನಾಳೇನೇ ಊರಿಗೆ ಹೋಗ್ತೀನಿ.

ಸರ್ ಟೋಬಿ: ಅದೇಕೆ, ನನ್ನ ಪ್ರಿಯ ನೈಟ್?

ಸರ್ ಆಂಡ್ರ್ಯೂ: ಏಕೆ ಅಂದರೆ? ಹೋಗು ಅಂತಾನೋ ಬೇಡ ಅಂತಾನೋ? ಕತ್ತಿವರಸೆ, ನರ್ತನ, ಕರಡಿ ಬೇಟೇಲಿ ಕಳೆದ ಕಾಲಾನ ಭಾಷೆಗಳನ್ನು ಕಲಿಯೋದಕ್ಕೆ ಉಪಯೋಗಿಸಬೇಕಾಗಿತ್ತೂಂತ ನನಗೆ ತೋರತ್ತೆ. ಓ, ನಾನು ಕಲೆಗಳ ಅಭ್ಯಾಸ ಮಾಡಿದ್ದಿದ್ರೆ!

ಸರ್ ಟೋಬಿ: (ಅವನನ್ನು ತಬ್ಬಿಕೊಳ್ಳುತ್ತ) ಆಗ ನಿನ್ನ ತಲೆ ತುಂಬ ಸುಂದರವಾಗಿ ಕೂದಲು ತುಂಬಿಕೊಂಡಿರ್ತಾ ಇತ್ತು.

ಸರ್ ಆಂಡ್ರ್ಯೂ: ಅಂದರೆ, ಅದು ಕೂದಲನ್ನ ಚೆನ್ನಾಗಿರೋ ಹಾಗೆ ಮಾಡ್ತಿತ್ತು ಅಂತಾನಾ?

ಸರ್ ಟೋಬಿ: ಅನುಮಾನವೇ ಬೇಡ, ತಾನಾಗೇ ಗುಂಗುರಾಗೋದು ಸಾಧ್ಯವಿಲ್ಲ ಅನ್ನೋದನ್ನ ನೀನೇ ಕಾಣ್ತೇಯ.

ಸರ್ ಆಂಡ್ರ್ಯೂ : ಆದರೂ ಅದು ನಂಗೆ ಸುಮಾರಾಗಾದರೂ ಕಾಣತ್ತೆ ಅಲ್ವಾ ?

ಸರ್ ಟೋಬಿ : ತುಂಬ ಚೆನ್ನಾಗಿ ! ಕದಿರಿನ ಮೇಲೆ ದಾರ ಜೋತಿರೋ ಹಾಗೆ ; ಯಾರಾದರೂ ಒಬ್ಬಳು ಗೃಹಿಣಿ ಅದನ್ನು ತನ್ನ ಕಾಲುಗಳ ಮಧ್ಯೆ ಇರುಕಿಸಿಕೊಂಡು ಅದೆಲ್ಲ ಉದುರಿಹೋಗೋ ಹಾಗೆ ತಿರುಗಿಸೋದನ್ನ ನಾನು ನೋಡ್ತೀನಿ ಅನ್ನೋ ಆಸೆ ನಂಗಿದೆ.

ಸರ್ ಆಂಡ್ರ್ಯೂ : ಖಂಡಿತ ನಾನು ನಾಳೆ ಊರಿಗೆ ಹೊರಡ್ತೀನಿ, ಸರ್ ಟೋಬಿ. ನಿನ್ನ ಸೋದರ ಸೊಸೆ ಯಾರನ್ನೂ ಕಾಣಲ್ವಂತೆ, ಕಂಡರೂ ನನ್ನ ಕಡೆ ಗಮನ ಕೊಡ್ತಾರೆ ಅನ್ನೋದು ನಾಲ್ಕರಲ್ಲಿ ಒಂದು ಭಾಗದಷ್ಟು ಭರವಸೆ ಇಲ್ಲ. ಹತ್ತಿರ ಇರೋ ಕೌಂಟ್‌ರೇ ಅವರನ್ನು ವರಿಸೋದಕ್ಕೆ ಪ್ರಯತ್ನಪಡ್ತಿದಾರೆ, ಬೇರೆ.

ಸರ್ ಟೋಬಿ : ಅವರ ಕಡೆಗೆ ಅವಳ ಗಮನ ಇಲ್ಲ. ತನಗಿಂತ ಹೆಚ್ಚಿನ ಮಟ್ಟ, ಆಸ್ತಿ, ವಯಸ್ಸು, ಜಾಣ್ಮೆ ಇರೋರನ್ನ ಅವಳು ಒಪ್ಪೋದಿಲ್ಲ. ಹಾಗಂತ ಅವಳು ಹೇಳಿದ್ದನ್ನ ನಾನೇ ಕೇಳಿದೀನಿ. ಛೇ, ಅದರಲ್ಲೇ ಆಸೆ ಇರೋದು.

ಸರ್ ಆಂಡ್ರ್ಯೂ : ನಾನು ಇನ್ನೂ ಒಂದು ತಿಂಗಳು ಇಲ್ಲೇ ಉಳ್ಕೋತೀನಿ. ಈ ಪ್ರಪಂಚದಲ್ಲೇ ಅತ್ಯಂತ ವಿಚಿತ್ರ ಬುದ್ಧಿಯೋನು ನಾನು. ಕೆಲವು ಸಲ ಮುಖವಾಡದ ಆಟ ವಿಲಾಸಗಳು ಅಂದರೆ ನನಗ ತುಂಬ ಖುಷಿ.

ಸರ್ ಟೋಬಿ : ಈ ಮುಖವಾಡಗಳು ನಿಂಗೆ ಚೆನ್ನಾಗಿ ಬರುತ್ತೇನು, ನೈಟ್ ?

ಸರ್ ಆಂಡ್ರ್ಯೂ : ಓ ಇಲ್ಲೀರಿಯದಲ್ಲಿ ಎಂಥವನಿಗೂ ನಾನು ಸಮ. ನಂಗಿಂತ ಉತ್ತಮರಲ್ಲದೇ ಇರೋನು ಯಾರು ಬಂದರೂ ಸರಿ. ಆದರೂ ಮುದುಕನ ಸಮಕ್ಕೆ ನಾನು ಬರಲಾರೇಂತ ಇಟ್ಟುಕೋ.

ಸರ್ ಟೋಬಿ : ಗ್ಯಾಲಿಯರ್ಡ್ ನೃತ್ಯ ನಿಂಗೆ ಚೆನ್ನಾಗಿ ಬರುತ್ತಾ, ನೈಟ್ ?

ಸರ್ ಆಂಡ್ರ್ಯೂ : ನಿಜವಾಗಿ, ನಾನು ಹೋತದ ನೆಗೆತ ನೆಗೀಬಲ್ಲೆ.

ಸರ್ ಟೋಬಿ : (ತನ್ನಲ್ಲಿ) ನಾನು ಹೋತದ ಮಾಂಸ ಕತ್ತರಿಸಿಹಾಕಬಲ್ಲೆ.

ಸರ್ ಆಂಡ್ರ್ಯೂ : ಹಿಂದು ಹೆಜ್ಜೆ ಹಾಕೋದ್ರಲ್ಲಿ ನಾನು ಇಲ್ಲೀರಿಯದಲ್ಲಿ ಯಾರಿಗೂ ಕಡಿಮೆ ಇಲ್ಲ.

ಸರ್ ಟೋಬಿ : ಇವನ್ನೆಲ್ಲ ಯಾಕೆ ಮುಚ್ಚಿಟ್ಟುಕೊಂಡಿರೋದೂಂತ ? ಇಂಥ ಪ್ರತಿಭೆ ಮುಂದೆ ತೆರೆಯಾಕೆ ಮುಸುಕಿರ್ಬೇಕು ? ಶ್ರೀಮತಿ ಮಾಲ್‌ಳ ಚಿತ್ರಕ್ಕೆ ಆದ ಹಾಗೆ ಧೂಳು ಮುಚ್ಚಿಕೊಳ್ಳುತ್ತೆ ಅಂತಲೆ ? ಚರ್ಚ್‌ಗೆ ಹೋಗೋವಾಗ ಗ್ಯಾಲಿಯರ್ಡ್ ಶೈಲಿ, ವಾಪಸ್ಸು ಬರ್ತಾ ಕೊರಾಂಟೊ ಶೈಲೀಲಿ ನರ್ತಿಸ್ತಾ ಯಾಕೆ ಬರಬಾರದು ? ನಾನು ನಡೆಯೋದೇ ಕುಣಿದ ಹಾಕಿರಬೇಕೂಂತ ನಂಗೆ ; ಉಚ್ಚೆ ಹೊಯ್ಯೋವಾಗ ಕೂಡ ನಾನು ನರ್ತಿಸದೇ ಇರ್ತಿರ್ಲಿಲ್ಲ. ಒಳ್ಳೆ ಗುಣಗಳನ್ನ ಬಚ್ಚಿಡಬೇಕಾದ ಪ್ರಪಂಚವೇ ಇದು ? ನಿನ್ನ ಕಾಲಿನ ಮಾಟವಾದ ರಚನೆ ನೋಡಿಯೇ ನಾನಂದುಕೊಂಡೆ - ಅದು ಗ್ಯಾಲಿಯರ್ಡ್ ನಕ್ಷತ್ರದಲ್ಲೇ ರೂಪುಗೊಂಡಿರಬೇಕು ಅಂತ.

ಸರ್ ಆಂಡ್ರ್ಯೂ : ನಿಜ, ನನ್ನ ಕಾಲು ಗಟ್ಟಿಯಾಗಿದೆ. ಬೆಂಕಿ ಬಣ್ಣದ ಕಾಲು ಚೀಲದಲ್ಲೂ ಅವು ಚೆನ್ನಾಗಿಯೇ ಕಾಣ್ತವೆ. ಸ್ವಲ್ಪ ಏನಾದ್ರೂ ಖುಷಿ ಮಾಡೋಣವೇನು ?

ಸರ್ ಟೋಬಿ : ಸರಿ, ಮಾಡೋದಕ್ಕೆ ಬೇರೆ ತಾನೇ ಏನಿದೆ ? ನಾವು ವೃಷಭ ರಾಶಿಯಲ್ಲಿ ಹುಟ್ಟಿದೋರಲ್ಲವೇ ?

ಸರ್ ಆಂಡ್ರ್ಯೂ : ವೃಷಭ ! ಅದು ನಿಯಂತ್ರಿಸೋದು ಪಕ್ಕೆ - ಹೃದಯಗಳನ್ನ

ಸರ್ ಟೋಬಿ : ಇಲ್ಲಯ್ಯ, ಅದು ನಿಯಂತಿರ್ಸೋದು ಕಾಲು - ತೊಡೆಗಳನ್ನ. ಎಲ್ಲಿ ಸ್ವಲ್ಪ ಹೋತದ ನೆಗೆತ ಕುಣಿ ನೋಡೋಣ. (ಆಂಡ್ರ್ಯೂ ಹೆಜ್ಜೆ ಹಾಕುತ್ತ ಹಾಕುತ್ತ ಹಾರುತ್ತಾನೆ.) ಆ ! ಇನ್ನೂ ಮೇಲೆ. ಆಹಹಾ, ನಿಜವಾಗಿಯೂ ಸೊಗಸಾಗಿದೆ.

(ಅವರು ಹೋಗುತ್ತಾರೆ)

## ದೃಶ್ಯ ನಾಲ್ಕು

ಡ್ಯೂಕ್‌ನ ಅರಮನೆಯ ಒಂದು ಕೋಣೆ

(ವ್ಯಾಲೆಂಟೈನ್ ಮತ್ತು ಗಂಡುವೇಷದ ವಯೋಲ ಬರುತ್ತಾರೆ).

ವ್ಯಾಲೆಂಟೈನ್ : ಸಿಸೇರಿಯೋ, ಡ್ಯೂಕ್ ನಿಮ್ಮ ಬಗ್ಗೆ ಹೀಗೇ ಒಲವು ತೋರಿಸುತ್ತ ಹೋದರೆ ನೀವು ತುಂಬ ಬೇಗ ಮೇಲೇರಿ ಬಿಡ್ತೀರಿ. ನಿಮ್ಮನ್ನು ಅವರು

ನೋಡ್ತಾ ಇರೋದು ಮೂರು ದಿವಸದಿಂದಲೇ ಅವರೂ, ನೀವು ಅವರಿಗೆ ಹೊಸಬರಾಗೇನೂ ಉಳಿದಿಲ್ಲ.

ವಯೋಲ: ಅವರ ಮನಃಸ್ಥಿತಿ ಎಂಥದೋ ಅಂತಲೋ ಅಥವಾ ನಾನು ಅಜಾಗರೂಕ ಅಂತಲೋ ನೀವು ಭಯಪಡುತ್ತಿದ್ದೀರಿ ; ಅದಕ್ಕೇ ಅವರು ತಮ್ಮ ಪ್ರೇಮವನ್ನ ಮುಂದುವರಿಸೋದರ ಬಗ್ಗೆ ನಿಮಗೆ ಅನುಮಾನ. ಅವರ ಒಲವು ಚಂಚಲವಾದದ್ದು ಅಂತಲೇನು ನಿಮ್ಮ ಭಾವನೆ?

ವ್ಯಾಲೆಂಟೈನ್ : ಛೆ ಛೆ, ಹಾಗಲ್ಲ.

ವಯೋಲ: ತುಂಬ ಸಹಾಯವಾಯಿತು. ಅಗೋ ಕೌಂಟ್ ಬರುತ್ತಿದ್ದಾರೆ.

(ಡ್ಯೂಕ್, ಕ್ಯೂರಿಯೋ ಮತ್ತು ಸೇವಕರು ಬರುತ್ತಾರೆ.)

ಡ್ಯೂಕ್ : ಹೋ, ಸಿಸೇರಿಯೋನ ಯಾರು ಕಂಡಿರಿ?

ವಯೋಲ: ಇಲ್ಲಿಯೇ ಇದ್ದೇನೆ, ಪ್ರಭು, ತಮ್ಮ ಸೇವೆಯಲ್ಲಿ.

ಡ್ಯೂಕ್ : ನೀವೆಲ್ಲ ಸ್ವಲ್ಪ ದೂರ ಸರಿಯಿರಿ. (ಕ್ಯೂರಿಯೋ ಮತ್ತು ಸೇವಕರು ಹಿಂದೆ ಸರಿಯುತ್ತಾರೆ) ಸಿಸೇರಿಯೋ,
ನೀನು ಎಲ್ಲ ವಿಷಯಗಳನ್ನೂ ಬಲ್ಲೆ. ನನ್ನ ಹೃದಯ
ಪುಸ್ತಕವನ್ನೆ ನಿನ್ನೆದುರು ತೆರೆದಿಟ್ಟಿದ್ದೇನೆ ನಾನು.
ಆದ್ದರಿಂದ, ಸಭ್ಯ ಯುವಕ, ನೀನವಳೆಡೆಗೆ ನಡೆದು
ಅವಳಿಗಾಗಿ ಕಾದಿರು ; ಅವಳನ್ನು ಕಾಣುವುದಕ್ಕೆ
ಅಡ್ಡಿಯಾದರೆ, ಅವಳನ್ನು ಕಾಣುವವರೆಗೂ ನಿನ್ನ
ಕಾಲುಗಳು ಅಲ್ಲೇ ನಟ್ಟಿರುತ್ತವೆಂದು ತಿಳಿಸು.

ವಯೋಲ: ನೀವೆನ್ನುವುದು ನಿಜ, ಪ್ರಭುವೆ.
ಜನರೆನ್ನುವಂತೆ ಅವರು ದುಃಖಪೂರಿತರಾಗಿ
ಏಕಾಕಿಯಾಗಿದ್ದರೆ, ನನ್ನನ್ನವರು ಕಾಣಲಾರರು.

ಡ್ಯೂಕ್ : ಕೆಲಸ ಹಣ್ಣಾಗದಿದ್ದರೆ ಹಾಗೇ ಹಿಂದಿರುಗಬೇಡ ;
ಗಲಾಟೆ ಮಾಡಿ, ಸಭ್ಯತೆಯನ್ನು ಬಿಟ್ಟು ಪ್ರಯತ್ನಿಸು.

ವಯೋಲ: ಕಾಣುವ ಹಾಗಾದರೆ, ನಾನವರಿಗೆ ಏನು ಹೇಳಲಿ, ಪ್ರಭು?

ಡ್ಯೂಕ್ : ಆಗ ನನ್ನ ಪ್ರೇಮಾತಿಶಯವನ್ನವಳೆದುರು ತೋರು ;

ನನ್ನ ಆಳ ಪ್ರೇಮದ ಬಗ್ಗೆ ಹೇಳಿ ಆಶ್ಚರ್ಯಪಡಿಸು ;
ನನ್ನ ಸಂಕಟವನ್ನು ನೀನು ತೋಡಿಕೊಂಡರೆ ಒಳಿತು.
ಬಿಗಿಮುಖದ ನಿಯೋಗಿಗಿಂತ ನಿನ್ನ ತಾರುಣ್ಯ
ಕಂಡು ಅವಳು ಹೆಚ್ಚು ಗಮನವೀಯುತ್ತಾಳೆ.

ವಯೋಲ: ನನಗೆ ಹಾಗೆನ್ನಿಸುವುದಿಲ್ಲ, ಪ್ರಭು.

ಡ್ಯೂಕ್ : ಮುದ್ದು ಹುಡುಗ, ನನ್ನ ಮಾತನ್ನು ನಂಬು.
ನಿನ್ನ ಗಂಡಸು ಎಂದು ಹೇಳುವ ಜನರು ಸಹ
ನಿನ್ನ ವಯಸ್ಸನ್ನು ನಂಬುವುದಿಲ್ಲ. ನಿನ್ನದಕ್ಕಿಂತ
ಡಯನಾಳ ತುಟಿ ಕೂಡ ಹೆಚ್ಚು ಕೋಮಲವಲ್ಲ,
ಹವಳದಂತೆ ಕೆಂಪಲ್ಲ. ನಿನ್ನ ಸಣ್ಣ ಕಂಠ
ಹೆಣ್ಣಿನ ಕಂಠದಂತೆ ಆಳ, ಅದಿನ್ನೂ ಒಡೆದಿಲ್ಲ.
ಎಲ್ಲವೂ ಹೆಣ್ಣಿನಂತೆಯೇ ಕಾಣುತ್ತದೆ ನಿನ್ನಲ್ಲಿ.
ನೀನು ಹುಟ್ಟಿರುವ ನಕ್ಷತ್ರದ ಗುಣಗಳೆಲ್ಲವೂ
ಈ ಕೆಲಸಕ್ಕೆ ತಕ್ಕಂತಿವೆ. (ಸೇವಕರನ್ನು ಕರೆದು) ನಾಲ್ಕೈದು ಮಂದಿ
ಇವನೊಂದಿಗೆ ಹೋಗಿ, ಬೇಕಾದರೆ ಎಲ್ಲರೂ.
ಏಕೆಂದರೆ ಏಕಾಂತದಲ್ಲಿಯೇ ನನಗೆ ಸುಖ.
ಈ ಕೆಲಸದಲ್ಲಿ ನೀನು ಜಯಗಳಿಸಿದರೆ,
ನಿನ್ನ ಯಜಮಾನನಂತೇ ನೀನು ಸ್ವೇಚ್ಛೆಯಿಂದಿರಬಹುದು,
ಅವನ ಆಸ್ತಿಯನ್ನೆಲ್ಲಾ ನಿನ್ನದೆಂದೇ ತಿಳಿಯಬಹುದು.

ವಯೋಲ: ನಿಮ್ಮ ಪ್ರೀತಿಯ ಹೆಣ್ಣು ನಿಮ್ಮನ್ನೊಲಿಯುವಂತೆ ನಾನು
ಕೈಲಾದದ್ದನ್ನೆಲ್ಲ ಮಾಡುತ್ತೇನೆ. (ತನ್ನಲ್ಲಿ) ಆದರೂ ಕಷ್ಟ!
ಯಾರನ್ನೊಲಿವಂತೆ ಮಾಡಿದರೂ, ನಾನೇ ಇವರ ಹೆಂಡತಿ.

(ಹೋಗುತ್ತಾಳೆ)

## ದೃಶ್ಯ ಐದು

ಒಲಿವಿಯಳ ಮನೆಯ ಒಂದು ಕೋಣೆ
(ಮರೀಯ ಮತ್ತು ನಕಲಿ ಬರುತ್ತಾರೆ)

ಮರೀಯ: ಉಹ್ಞೂ, ನೀನೆಲ್ಲಿಗೆ ಹೋಗಿದ್ದೆ ಅಂತ ಹೇಳದಿದ್ದರೆ ನಿನ್ನ ಪರವಾಗಿ

ನಾನು ಕೂದಲೆಳೆಯಷ್ಟೂ ತುಟಿ ಬೇರೆ ಮಾಡೋಲ್ಲ. ನೀನು ತಪ್ಪಿಸಿಕೊಂಡಿದ್ದಕ್ಕೆ ಒಡತಿ ನಿಂಗೆ ನೇಣು ಹಾಕ್ತಾರೆ.

ನಕಲಿ: ಹಾಕಲಿ, ಪರವಾಗಿಲ್ಲ. ಈ ಪ್ರಪಂಚದಲ್ಲಿ ಚೆನ್ನಾಗಿ ನೇಣಿಗೆ ಬಲಿಯಾದ್ರೆ ಅಂಥೋನು ಯಾವ ಶತ್ರು ಬಾವುಟಕ್ಕೂ ಹೆದರ್ಬೇಕಾಗಿಲ್ಲ.

ಮರೀಯ: ಅದನ್ನು ತೋರಿಸು, ನೋಡೋಣ.

ನಕಲಿ: ಭಯಪಡೋದಕ್ಕೆ ಯಾರನ್ನಾದ್ರೂ ಕಂಡ್ರೆ ತಾನೇ?

ಮರೀಯ: ಒಕ್ಕೆ ಪ್ಯಾಲಿಪಿಂಡಿ ಉತ್ತರ. 'ನಾನು ಯಾವ ಶತ್ರು ಬಾವುಟಕ್ಕೂ ಹೆದರೊಲ್ಲ' ಅನ್ನೋ ಗಾದೆ ಎಲ್ಲಿ ಹುಟ್ಟಿತೂಂತ ನಾ ಹೇಳಬಲ್ಲೆ.

ನಕಲಿ: ಎಲ್ಲಿ ಹುಟ್ಟಿತಮ್ಮ, ಮೇರಿ?

ಮರೀಯ: ಯುದ್ಧದಲ್ಲಿ; ನಿನ್ನ ಪೆದ್ದು ಉತ್ತರದಲ್ಲಿ ಇದನ್ನು ಹೇಳೋ ಅಷ್ಟು ಧೈರ್ಯವೇ ನಿಂಗೆ!

ನಕಲಿ: ಬುದ್ಧಿವಂತರಿಗೆ ದೇವರು ಬುದ್ಧಿಕೊಡಲಿ ; ಮೂರ್ಖರು ತಮಗಿದ್ದಷ್ಟು ಬುದ್ಧಿವಂತಿಕೇನ ತೋರಿಸಲಿ.

ಮರೀಯ: ಆದರೂ, ನೀನು ಇಷ್ಟು ದಿನ ತಪ್ಪಿಸಿಕೊಂಡಿದ್ದಕ್ಕೆ ನಿನಗೆ ನೇಣೇ ಗತಿ. ಅಥವಾ ನಿನ್ನನ್ನು ಓಡಿಸಿಬಿಡೋದೂ ನೇಣಿನ ಹಾಗೇ ಅಲ್ಲವೇನು?

ನಕಲಿ: ಕೆಲವೇಳೆ ಒಳ್ಳೇ ನೇಣು ಕೆಟ್ಟ ಮದುವೇನ ತಪ್ಪಿಸುತ್ತೆ. ಇನ್ನು ಓಡಿಸೋ ಮಾತು, ಬೇಸಗೆ ಅದನ್ನು ತಡೆಯೋದಕ್ಕೆ ಸಹಾಯ ಮಾಡಲಿ.

ಮರೀಯ: ಹಾಗಾದರೆ ನೀನು ನಿರ್ಧಾರ ಮಾಡಿಬಿಟ್ಟಿದ್ದೀಯ ಅನ್ನು.

ನಕಲಿ: ಪೂರ್ತಿಯಾಗಿ ಅಲ್ಲ; ಎರಡು ವಿಷಯಗಳ ಬಗ್ಗೆ ನನ್ನ ಮನಸ್ಸು ಬಿಗಿಯಾಗಿ ಗಂಟುಹಾಕಿದೆ.

ಮರೀಯ: ಒಂದು ಗಂಟು ಬಿಚ್ಚಿ ಹೋದರೂ ಪರವಾಗಿಲ್ಲ, ಇನ್ನೊಂದರಿಂದ ಬಿಗಿಯಾಗೇ ಇರುತ್ತೆ; ಎರಡೂ ಬಿಚ್ಚಿಹೋದರೆ ಚಣ್ಣವೇ ಜಾರುತ್ತೆ.

ನಕಲಿ: ಸರಿಯಾಗಿ ಹೇಳಿದೆ ನೋಡು ಮತ್ತೆ. (ಹೋಗಲು ಅವಳು ತಿರುಗುತ್ತಾಳೆ) ಸರಿ ಬಿಡು. ಸರ್ ಟೋಬಿ ಕುಡಿಯೋದನ್ನು

ನೀನೇನಾದ್ರೂ ನಿಲ್ಲಿಸಿದ್ರೆ ಇಲ್ಲೀರಿಯಾದ ಯಾವುದೇ ಹೆಣ್ಣಿಗೂ ಸಮನಾದ ಜಾಣೆ ಅಂತ ಅನ್ನಿಸ್ಕೋತೀಯ.

ಮರೀಯ: ಬಾಯಿ ಮುಚ್ಚು ಪಟಿಂಗ, ಆ ವಿಷಯ ಸಾಕು. ಒಡತಿ ಬರ್‍ತಿದಾರೆ. ಹೇಳಬೇಕಾದ ನೆವವನ್ನ ಚೆನ್ನಾಗಿ ಯೋಚನೆ ಮಾಡಿ ಜಾಣತನದಿಂದ ಹೇಳು.

(ಕಪ್ಪು ಉಡುಪಿನಲ್ಲಿರುವ ಒಲಿವಿಯ ಬರುತ್ತಾಳೆ ; ಮಾಲ್ವೋಲಿಯೋ, ಸೇವಕರು ಹಿಂಬಾಲಿಸುತ್ತಾರೆ ; ಅವಳು ಪೀಠದ ಮೇಲೆ ಕುಳಿತುಕೊಳ್ಳುತ್ತಾಳೆ.)

ನಕಲಿ: (ಅವರನ್ನೆಲ್ಲ ಗಮನಿಸದವನಂತೆ ನಟಿಸುತ್ತ) ಓ ಜಾಣತನವೇ, ನಿನಗಿಷ್ಟವಿದ್ದರೆ, ನಾನು ಚೆನ್ನಾಗಿ ನಕಲಿ ಮಾಡೋ ಹಾಗೆ ಕೃಪೆಮಾಡು. ಎಷ್ಟೋ ವೇಳೆ ತಮಗೆ ಜಾಣತನವಿದೆ ಅಂತ ತಿಳಿದವರು ಮೂರ್ಖರಾಗಿರ್‍ತಾರೆ ; ಆದರೆ ನಾನು, ನಿನ್ನ ಕೃಪೆ ನನ್ನ ಮೇಲೆ ಕಡಿಮೆ ಇದೇ ಅನ್ನೋದು ಖಂಡಿತವಾಗಿದ್ರೂ, ಜಾಣನಾಗಿಬಿಡಬಹುದು. ಕ್ವಿನಾಪಾಲ ಋಷಿ ಅಪ್ಪಣೆ ಕೊಡಿಸಿರೋದೇನು ? ''ಮೂರ್ಖ ಜಾಣ ನಾಗೋದು ಲೇಸು.'' ಅಂತ. (ತಿರುಗಿ) ಒಡತಿಯರಿಗೆ ಜಯವಾಗಲಿ !

ಒಲಿವಿಯ: ಈ ನಕಲಿ ಮನುಷ್ಯನ್ನ ಆ ಕಡೆ ಎಳೆದುಕೊಂಡು ಹೋಗಿ.

ನಕಲಿ: ಏನ್ರಯ್ಯ, ಕೇಳಿಸ್ತೋಲ್ಲವಾ ? ಒಡತೀರನ್ನ ಆ ಕಡೆ ಕರಕೊಂಡು ಹೋಗಿ.

ಒಲಿವಿಯ: ಸಾಕು ಹೋಗು, ನೀನೊಬ್ಬ ಒಣ ನಕಲಿ. ನೀನು ನನ್ನ ಹತ್ತಿರ ಇರೋದು ಇನ್ನು ಸಾಕು. ಅಲ್ಲದೆ ನೀನು ಅಪ್ರಮಾಣಿಕನಾಗ್ತಿದ್ದೀಯೆ.

ನಕಲಿ: ಒಡತಿಯರೆ, ಈ ಎರಡು ತಪ್ಪುಗಳನ್ನು ಹೆಂಡ ಮತ್ತು ಒಳ್ಳೇ ತಿಳಿವಳಿಕೆಗಳಿಂದ ಸರಿಮಾಡಬಹುದು. ಒಣ ನಕಲೀಗೆ ಹೆಂಡ ಕೊಟ್ಟರೆ ಅವನು ಒಣಕಲನಾಗಿರೋಲ್ಲ. ಅಪ್ರಾಮಾಣಿಕನಿಗೆ ತಿದ್ದಿಕೊಳ್ಳೋಕೆ ಅವಕಾಶ ಕೋಡಿ, ಆಮೇಲೆ ಅವನು ಅಪ್ರಾಮಾಣಿಕನಾಗಿ ಉಳೀಲಾರ. ಹಾಗೂ ಆಗದಿದ್ದರೆ, ದರ್ಜಿ ಕೈಗೆ ಕೊಟ್ಟರೆ ಅವನು ತೇಪೆ ಹಾಕ್ತಾನೆ. ಸರಿ ಮಾಡೋದು ಅಂದರೆ ತೇಪೆ

ಹಾಕೋದು ಅಂತ ತಾನೇ ? ಪುಣ್ಯ ಹಾರಿಬಿಟ್ತು ಅಂದ್ರೆ ಅದಕ್ಕೆ ಪಾಪದ ತೇಪೆ ಹಾಕಿದೆ. ಅಂತ ಅರ್ಥ. ಹಾಗೇನೇ ಪಾಪ ಸರಿಹೋಯಿತು ಅಂದ್ರೆ ಪುಣ್ಯದ ತೇಪೆ ಹಾಕಿದೆ ಅಂತ ಅರ್ಥ. ಈ ಸರಳ ತರ್ಕ ಪ್ರಯೋಜನಕ್ಕೆ ಬಂದ್ರೆ ಒಳ್ಳೇದು ; ಇಲ್ಲದಿದ್ದರೆ ಮಾಡೋದೇನು ? ಕೇಡು ಬಿಟ್ಟರೆ ನಿಜವಾದ ದುರ್ದೈವ ಗಂಡನಿಲ್ಲ. ಆದ್ದರಿಂದ ಸೌಂದರ್ಯವೇ ಒಂದು ಹೂ : ನಕಲೀನ ಆಚೆಗೆ ಕರಕೊಂಡು ಹೋಗೀಂತ ಒಡತೀರು ಹೇಳಿದರು. ಅದಕ್ಕೇ ಹೇಳ್ತೀನಿ : ಒಡತೀರನ್ನ ಕರಕೊಂಡು ಹೋಗ್ರೀ ಅಂತ.

ಒಲಿವಿಯ : ಅಯ್ಯ, ನಾನವನಿಗೆ ಹೇಳಿದ್ದು ನಿನ್ನ ಕರಕೊಂಡು ಹೋಗೋದಕ್ಕೆ.

ನಕಲಿ : ಅತ್ಯಂತ ದೊಡ್ಡ ತಪ್ಪು ! ಕಾವಿ ಉಟ್ಟೋರೆಲ್ಲ ಸನ್ಯಾಸಿಗಳಲ್ಲ. ಹಾಗೇನೇ ನಾನು ಮದುಳಲ್ಲೂ ನಕಲಿ ಉಡುಪು ಹಾಕ್ಕೊಂಡಿಲ್ಲ. ಒಡತಿ, ನೀವು ಮೂರ್ಖರು ಅಂತ ತೋರಿಸಿ ಕೊಡೋಕೆ ನಂಗೆ ಅಪ್ಪಣೆ ಕೊಡಿ.

ಒಲಿವಿಯ : ನೀನು ಹಾಗೆ ತೋರಿಸಿಕೊಡ್ತೀಯಾ ?

ನಕಲಿ : ಕುಶಲತೆಯಿಂದ, ಒಡತಿ.

ಒಲಿವಿಯ : ಹಾಗಾದರೆ ತೋರಿಸು.

ನಕಲಿ : ಅದಕ್ಕೆ ನಿಮ್ಮನ್ನು ನಾನು ಪ್ರಶ್ನಿಸಬೇಕಾಗುತ್ತೆ, ಒಡತಿ. ನನ್ನ ಸದಾಚಾರದ ಸಣ್ಣಿಲಿ, ಉತ್ತರ ಹೇಳಿ.

ಒಲಿವಿಯ : ಆಯಿತಪ್ಪ, ಕಾಲಹರಣಕ್ಕೆ ಬೇರೇನೂ ಇಲ್ಲ. ನೀನು ಏನು ತೋರಿಸ್ತೀಯೋ ನೋಡುತ್ತೇನೆ.

ನಕಲಿ : ಒಳ್ಳೆ ಒಡತಿ, ನಿನ್ನ ದುಃಖಕ್ಕೇನು ಕಾರಣ ?

ಒಲಿವಿಯ : ಒಳ್ಳೆ ನಕಲಿ, ನನ್ನ ಅಣ್ಣನ ಸಾವು.

ನಕಲಿ : ಅವನ ಆತ್ಮ ನರಕ ಸೇರಿದೆ ಅಂತ ನನ್ನ ಭಾವನೆ, ಒಡತಿ.

ಒಲಿವಿಯ : ಅವನ ಆತ್ಮ ಸ್ವರ್ಗದಲ್ಲಿದೆ ಅಂತ ನನ್ನ ಭಾವನೆ, ನಕಲಿ.

ನಕಲಿ : ಅಣ್ಣನ ಆತ್ಮ ಸ್ವರ್ಗದಲ್ಲಿರೋದಕ್ಕೆ ದುಃಖಪಡೋರು ದೊಡ್ಡ ಮೂರ್ಖರು. ಆ ಮೂರ್ಖಳನ್ನ ಆಚೆ ಕರಕೊಂಡು ಹೋಗಿ.

ಒಲಿವಿಯ: ಈ ನಕಲಿ ಬಗ್ಗೆ ನಿನಗೆ ಏನನ್ನಿಸುತ್ತದೆ, ಮಾಲ್ವೋಲಿಯೋ? ಇವನು ತಿದ್ದಿಕೋಬಹುದಲ್ಲವೇ?

ಮಾಲ್ವೋಲಿಯೊ: ಹೌದು, ಸಾವಿನ ನೋವು ಅಲುಗಾಡಿಸುವವರೆಗೂ ತಿದ್ದಿಕೋತ ಇರಬಹುದು. ಶಕ್ತಿಹೀನತೆ ಬುದ್ಧಿವಂತರನ್ನ ದುರ್ಬಲಗೊಳಿಸಿದರೆ, ಮೂರ್ಖರ ಮೂರ್ಖತನವನ್ನು ಹೆಚ್ಚು ಮಾಡಿಸುತ್ತೆ.

ನಕಲಿ: ಸ್ವಾಮಿ, ದೇವರು ನಿಮಗೆ ಹೆಚ್ಚು ಶಕ್ತಿಹೀನತೇನ ಉಂಟು ಮಾಡಲಿ, ಅದರಿಂದ ನಿಮ್ಮ ಮೂರ್ಖತನ ಹೆಚ್ಚುವಂತಾಗಲಿ ! ನಾನು ಜಾಣನರಿ ಅಲ್ಲ ಅಂತ ಸರ್ ಟೋಬಿ ಆಣೆಯಿಟ್ಟು ಹೇಳ್ತಾರೆ, ಆದರೆ ನೀವು ಮೂರ್ಖರಲ್ಲ ಅಂತ ಎರಡು ಪೆನ್ನಿಕೊಟ್ಟರೂ ಹೇಳೋಲ್ಲ.

ಒಲಿವಿಯ: ಅದಕ್ಕೆ ನೀವೇನು ಹೇಳುತ್ತೀರಿ, ಮಾಲ್ವೋಲಿಯೋ?

ಮಾಲ್ವೋಲಿಯೊ: ತಮ್ಮಂತಹವರು ಈ ಬಂಚೆ ಠಕ್ಕನ ಮಾತುಗಳನ್ನ ಕೇಳಿ ಸಂತೋಷ ಪಡ್ತಿರೋದನ್ನ ಕಂಡು ನನಗೆ ಆಶ್ಚರ್ಯವಾಗ್ತಿದೆ. ಅವತ್ತು ಕಲ್ಲಿಗಿಂತ ಮೇಲಲ್ಲದ ಮೆದುಳಿರೋ ಒಬ್ಬ ಸಾಮಾನ್ಯ ನಕಲಿ ಕೈಲಿ ಇವನು ಸೋತುಬಿಟ್ಟ, ನೀವೇ ನೋಡಿ, ಈಗಾಗಲೇ ಅವನ ಬತ್ತಳಿಕೇಲಿ ಬಾಣವೇ ಉಳಿದಿಲ್ಲ. ನೀವೇ ನಕ್ಕು ಅವನಿಗೊಂದು ಅವಕಾಶ ಕೊಡದಿದ್ದರೆ ಅವನ ಬಾಯೇ ಬಂದಾಗುತ್ತೆ. ಇಂಥ ಹಳಸಲು ಕಗ್ಗದ ನಕಲಿಗಳನ್ನು ಕಂಡು ಹಲ್ಲುಕಿಸಿಯೋ ಬುದ್ಧಿವಂತರು ಈ ನಕಲಿಗಳ ಮರಿಗಳು ಅಂತ ನಾನು ಹೇಳ್ತೀನಿ.

ಒಲಿವಿಯ: ಆತ್ಮರತಿಯಿಂದ ನಿಮ್ಮ ಆರೋಗ್ಯವೇ ಹಾಳಾಗಿ ಹೋಗಿದೆ, ಮಾಲ್ವೋಲಿಯೊ, ಅದಕ್ಕೇ ನಿಮಗೆ ಅರುಚಿ ಹುಟ್ಟಿದೆ. ಔದಾರ್ಯ, ಮುಗ್ಧತೆ, ಧಾರಾಳ ಮನೋಭಾವಗಳಿದ್ದರೆ ಫಿರಂಗಿ ಗುಂಡುಗಳೂ ಹಕ್ಕಿ ಹೊಡೆಯೋ ಮೊಂಡು ಬಾಣಗಳ ಹಾಗೆ ಕಾಣಿಸುತ್ತವೆ. ನಕಲಿ ಅಂತ ನೇಮಕವಾಗಿರೋನು ಕುಚೋದ್ಯದ ಮಾತುಗಳನ್ನ ಬಿಟ್ಟು ಬೇರೇನೂ ಆಡದೇ ಇರಬಹುದು, ಅದು ತಪ್ಪಲ್ಲ; ಹಾಗೇನೇ ವಿವೇಕಿ ಎನ್ನಿಸಿಕೊಂಡವನು ಸುಮ್ಮನೆ ಖಂಡನೆ ಮಾಡ್ತಿರಬಹುದು ಅದೂ ತಪ್ಪಲ್ಲ.

ನಕಲಿ: ನಕಲಿಗಳ ಬಗ್ಗೆ ಇಷ್ಟೊಂದು ಒಳ್ಳೇ ಮಾತಾಡ್ತಿರೋ ನಿಮಗೆ ಬುಧ ಸುಳ್ಳು ಹೇಳೋ ಜಾಣ್ಮೇನ ಕರುಣಿಸಲಿ.

(ಮರಿಯ ವಾಪಸು ಬರುತ್ತಾಳೆ)

ಮರೀಯ: ಅಮ್ಮಾವ್ರೆ, ಬಾಗಿಲ ಹತ್ರ ಒಬ್ಬ ಯುವಕ ಬಂದು ನಿಂತಿದ್ದಾನೆ. ನಿಮ್ಮನ್ನು ಕಂಡು ಮಾತಾಡ್ಬೇಕಂತೆ.

ಒಲಿವಿಯ: ಅವನು ಕೌಂಟ್ ಆರ್ಸಿನೋ ಕಡೆಯವನಂತೇನು ?

ಮರೀಯ: ನನಗೆ ಗೊತ್ತಿಲ್ಲ, ಅಮ್ಮ. ಅವನು ನೋಡೋಕೆ ತುಂಬ ಚೆನ್ನಾಗಿದ್ದಾನೆ. ಜೊತೆಯಲ್ಲಿ ಸೇವಕರೂ ಇದ್ದಾರೆ.

ಒಲಿವಿಯ: ಅವನನ್ನು ತಡೆದು ನಿಲ್ಲಿಸಿರುವವರು ಯಾರು ?

ಮರೀಯ: ನಿಮ್ಮ ನಂಟರು – ಸರ್ ಟೋಬಿ ಅವರು.

ಒಲಿವಿಯ: ದಯವಿಟ್ಟು ಅವನನ್ನು ದೂರಕಳಿಸು ಹೋಗು. ಅವನೊಬ್ಬ ಹುಚ್ಚನ ಹಾಗೆ ಮಾತಾಡುತ್ತಾನೆ, ತಲೆಹರಟೆ. (ಮರೀಯ ಅವಸರದಿಂದ ಹೋಗುತ್ತಾಳೆ.) ನೀವು ಹೋಗಿ, ಮಾಲ್ವೋಲಿಯೋ. ಅವನು ಕೌಂಟ್‌ನ ಕಡೆಯಿಂದ ಒಲಿಸೋದಕ್ಕಾಗಿ ಬಂದಿದ್ದರೆ ನನಗೆ ಮೈ ಚೆನ್ನಾಗಿಲ್ಲವೆಂದೋ ಮನೇಲಿ ಇಲ್ಲವೆಂದೋ ಅಥವಾ ನಿಮಗೆ ಏನು ತೋಚುತ್ತದೋ ಅದನ್ನೇ ಹೇಳಿ ಕಳಿಸಿ. (ಮಾಲ್ವೋಲಿಯೋ ಹೋಗುತ್ತಾನೆ). ನೋಡಿದೆಯೇನಪ್ಪ ಅಣ್ಣ, ನಿನ್ನ ನಕಲಿ ಹೇಗೆ ಹಳಸಲು ಆಗುತ್ತಾ ಇದೆ, ಜನಗಳಿಗೆ ರುಚಿಸೋದಿಲ್ಲ ಅನ್ನೋದನ್ನ ?

ನಕಲಿ: ಒಡತಿ, ನೀವು ನಮ್ಮ ಪರವಾಗಿ ಮಾತಾಡಿದಿರಿ, ನಿಮ್ಮ ಹಿರೀ ಮಗನೇ ಒಬ್ಬ ನಕಲೀನೇನೋ ಅನ್ನೋ ಹಾಗೆ ; ದೇವರು ಅವನ ತಲೇಲಿ ಬೃಹಸ್ಪತಿಯ ಮಿದುಳನ್ನೇ ತುರುಕಲಿ. ಏಕೆಂದರೆ ಇತ್ತ ಕಡೆ ನಿಮ್ಮ ನೆಂಟರೊಬ್ಬರು ಬರ್‍ತಾ ಇದಾರೆ – ಅವರ ಬುದ್ಧಿ ತುಂಬ ಎಳಸು. (ಸರ್ ಟೋಬಿ ಬೆಲ್ಚ್ ಬರುತ್ತಾನೆ).

ಒಲಿವಿಯ: ನನ್ನಾಣೆ, ಕುಡಿದು ಅರ್ಧ ಬುದ್ಧಿ ಕಳೆದುಕೊಂಡಿದ್ದಾನೆ ! ಬಾಗಿಲ ಹತ್ತಿರ ಬಂದಿರೋರು ಯಾರು, ಮಾವ ?

ಸರ್ ಟೋಬಿ: (ಅಸ್ಪಷ್ಟವಾಗಿ ಮಾತಾಡುತ್ತ) ಒಬ್ಬ ದೊಡ್ಡ ಮನುಷ್ಯ.

ಒಲಿವಿಯ: ದೊಡ್ಡ ಮನುಷ್ಯ ? ಎಂಥವನು ?

ಸರ್ ಟೋಬಿ: ಇಲ್ಲಿ ಇನ್ನೊಬ್ಬ ದೊಡ್ಡ ಮನುಷ್ಯ ಬರ್‍ತಾ ಇದಾನೆ. (ಬಿಕ್ಕಳಿಕೆಯಿಂದ)

ಅಜೀರ್ಣ ಈ ರೀತಿ ತೊಂದರೆ ಮಾಡ್ತಾ ಇದೆ. (ನಕಲಿ ನಗುತ್ತಾನೆ). ಯಾಕೋ ಹೆಂಡಪೋತ?

ನಕಲಿ: ಸ್ವಾಮಿ, ಸರ್ ಟೋಬಿಯವರೇ —

ಒಲಿವಿಯ: ಮಾವ, ಈ ಮತ್ತಿನಲ್ಲೂ ನೀನು ಹೇಗೆ ಬಂದೆ?

ಸರ್ ಟೋಬಿ: ಕುತ್ತು ? ನನಗೆ ಯಾವ ಕುತ್ತೂ ಬರಲಾರದು. ಬಾಗಿಲ ಹತ್ರ ಯಾರೋ ಇದಾರೆ.

ಒಲಿವಿಯ: ಸರಿ, ಯಾರವನು?

ಸರ್ ಟೋಬಿ: ಅವನು ಎಂಥ ಬೂತಬೇಕಾದ್ರೂ ಆಗಿಕೊಳ್ಳಲಿ, ನಂಗೇನು? ನಂಗೆ 'ಭಕ್ತಿ' ಕೊಡು ಅಂತ ಅಷ್ಟೆ ದೇವರನ್ನು ಕೇಳಿಕೊಳ್ಳೋದು. (ಬಾಗಿಲ ಕಡೆ ತತ್ತರಿಸುತ್ತ ಹೋಗುತ್ತಾನೆ) ಎಲ್ಲ ಒಂದೇ.

(ಹೋಗುತ್ತಾನೆ)

ಒಲಿವಿಯ: ಕುಡಿದವನು ಹೇಗಿರುತ್ತಾನೋ, ನಕಲಿ?

ನಕಲಿ: ನೀರಲ್ಲಿ ಮುಳುಗಿದೋನ ಹಾಗೆ, ಮೂರ್ಖನ ಹಾಗೆ, ಹುಚ್ಚನ ಹಾಗೆ. ಮೈ ಬಿಸಿ ಏರಿದ ಮೇಲೆ ಒಂದು ಬುಡ್ಡಿ ಹಾಕಿದ್ರೆ ಮೂರ್ಖನ ಹಾಗೆ ಆಗ್ತಾನೆ, ಎರಡನೇದೂ ತಗೊಂಡ್ರೆ ಹುಚ್ಚನೇ ಆಗ್ತಾನೆ, ಮೂರನೇದನ್ನೇನಾದ್ರೂ ತೊಗೊಂಡ್ರೆ ಮುಳುಗೇ ಹೋಗ್ತಾನೆ.

ಒಲಿವಿಯ: ಹೋಗು, ಪಂಚಾಯಿತಿದಾರನನ್ನು ಕರೆದುಕೊಂಡು ಬಾ, ಮಾವನ ವಿಚಾರ ಸ್ವಲ್ಪ ವಿಚಾರಣೆ ಮಾಡಲಿ. ಹೋಗು, ನೋಡಿಕೊಂಡು ಬಾ. (ಹೋಗುತ್ತಾನೆ.)

(ಮಾಲ್ವೋಲಿಯೋ ಬರುತ್ತಾನೆ)

ಮಾಲ್ವೋಲಿಯೊ: ಅಮ್ಮ, ಆ ಯುವಕ ನಿಮ್ಮ ಜೊತೆಯಲ್ಲಿ ಮಾತಾಡಲೇ ಬೇಕೂಂತ ಹಟ ಹಿಡಿದಿದ್ದಾನೆ. ನಿಮಗೆ ಮೈಲಿ ಚೆನ್ನಾಗಿಲ್ಲ ಅಂತ ಹೇಳಿದೆ, ಆದರೆ ಆ ವಿಷಯ ತನಗೆ ಗೊತ್ತಿರೋದರಿಂದಲೇ ಬಂದಿದ್ದೀನಿ ಅಂತ ಹೇಳ್ತಾನೆ. ನೀವು ಮಲಗಿದ್ದೀರಿ ಅಂತಲೂ ಹೇಳಿದೆ. ಅದೂ ಮೊದಲೇ ತನಗೆ ಗೊತ್ತಿತ್ತು, ಅದಕ್ಕೋಸ್ಕರವೇ ನಿಮ್ಮ ಜೊತೆ ಮಾತಾಡೋದಕ್ಕೆ ಬಂದಿರೋದು ಅಂತ ಹೇಳ್ತಾನೆ. ಅವನಿಗೆ ಏನು ಹೇಳಲಿ ಈಗ ? ನಾವು ಏನು ಹೇಳಿದ್ರೂ ಅವನನ್ನು ಜಪ್ಪಯ್ಯ

ಅನ್ನೋಕೆ ಆಗ್ತಾ ಇಲ್ಲ.

ಒಲಿವಿಯ : ನನ್ನ ಜೊತೆ ಅವನು ಮಾತನಾಡೋದಕ್ಕೆ ಸಾಧ್ಯವಿಲ್ಲ ಅಂತ ಹೇಳು.

ಮಾಲ್ವೋಲಿಯೊ : ನಾನು ಹಾಗಂತಲೇ ಹೇಳಿದೆ ; ಕೊನೆಗೆ, ಷರೀಫರ ನೋಟೀಸ್ ಕಂಬದ ಹಾಗೆ ಬಾಗಿಲ ಹತ್ತಿರ ನಿಂತು ಕಾಯ್ತೀನಿ, ಬೆಂಚಿನ ಕಾಲಿನ ಹಾಗೆ ಬಿದ್ದಿರ್ತೀನಿ, ಆದರೆ ನಿಮ್ಮ ಜೊತೇಲಿ ಮಾತಾಡಿಕೊಂಡೇ ಹೋಗಬೇಕು ಅಂತ ಹೇಳ್ತಾನೆ.

ಒಲಿವಿಯ : ಎಂಥ ಮನುಷ್ಯ ಅವನು ?

ಮಾಲ್ವೋಲಿಯೊ : ಅಂದ್ರೆ ? ನಮ್ಮೆಲ್ಲರ ಹಾಗೇನೇ ಮನುಷ್ಯ.

ಒಲಿವಿಯ : ಅಂದರೆ ಎಂಥ ಸ್ವಭಾವದವನೂಂತ ?

ಮಾಲ್ವೋಲಿಯೊ : ತುಂಬ ಒರಟು ಸ್ವಭಾವದೋನು. ನಿಮಗೆ ಇಷ್ಟವಿರಲಿ ಇಲ್ಲದೇ ಇರಲಿ, ನಿಮ್ಮ ಜೊತೆ ಅವನು ಮಾತಾಡಲೇ ಬೇಕಂತೆ.

ಒಲಿವಿಯ : ಹೇಗೆ ಕಾಣಿಸ್ತಾನೆ ಅವನು, ವಯಸ್ಸೆಷ್ಟಿರಬಹುದು ?

ಮಾಲ್ವೋಲಿಯೊ : ದೊಡ್ಡವನು ಅಂತ ಹೇಳೋ ಅಷ್ಟು ವಯಸ್ಸಾಗಿಲ್ಲ, ಹುಡುಗ ಅಂತ ಹೇಳೋ ಅಷ್ಟು ಚಿಕ್ಕವನೂ ಅಲ್ಲ. ಬಟಾಣಿ ಕಾಳಾಗೋದಕ್ಕೆ ಮುಂಚೆ ಇರೋ ಹಾಲುಗಾಳಿನ ಹಾಗೆ, ಸೇಬು ಹಣ್ಣಾಗೋಕೆ ಮುಂಚೆ ಇರೋ ಹಸಿರು ದೋರೆಗಾಯಿ ಹಾಗಿದಾನೆ. ಆ ಕಡೆ ಹುಡುಗನೂ ಅಲ್ಲ, ಈ ಕಡೆ ದೊಡ್ಡೋನೂ ಅಲ್ಲ ಅನ್ನೋ ಮಧ್ಯ ವಯಸ್ಸು. ನೋಡೋದಕ್ಕೆ, ಲಕ್ಷಣವಾಗಿದ್ದಾನೆ, ತುಂಬ ಹರಿತವಾಗಿ ಮಾತಾಡ್ತಾನೆ. ಅವನ್ನ ನೋಡಿದರ ತಾಯಿ ಹಾಲು ಅವನ ಮೈಯಿಂದ ಇನೂ ಕರಗಿರೋ ಹಾಗೆ ಕಾಣಿಸೋಲ್ಲ.

ಒಲಿವಿಯ : ಅವನನ್ನು ಒಳಕ್ಕೆ ಬಿಡು ; ನನ್ನ ಆಪ್ತಸಖಿಯನ್ನು ಕಳಿಸು.

ಮಾಲ್ವೋಲಿಯೊ : (ಬಾಗಿಲ ಬಳಿ ಹೋಗಿ) ಆಪ್ತಸಖಿಯುವರೇ, ಒಡತಿ ಕರೆಯುತ್ತಿದ್ದಾರೆ (ಹೋಗುತ್ತಾನೆ) (ಮರೀಯ ವಾಪಸ್ಸು ಬರುತ್ತಾಳೆ)

ಒಲಿವಿಯ : ಎಲ್ಲಿ ನನ್ನ ಮುಖದ ಮುಸುಕನ್ನು ಕೊಡು ; ನನ್ನ ಮುಖಕ್ಕೆ ಹಾಕು ಬಾ. ಮತ್ತೊಮ್ಮೆ ಆರ್ಸಿನೋರ ಸಂದೇಶ ಕೇಳೋಣ. (ಮರೀಯ

ಮುಸುಕು ತೊಡಿಸುತ್ತಾಳೆ) (ಸಿಸೇರಿಯೋ ವೇಷದ ವಯೋಲ ಮತ್ತು ಸೇವಕರು ಬರುತ್ತಾರೆ)

ವಯೋಲ: ಈ ಮನೆಯ ಮಾನ್ಯ ಒಡತಿ ಯಾರು?

ಒಲಿವಿಯ: ನನ್ನನ್ನೇ ಕೇಳಿ, ಅವರ ಪರವಾಗಿ ಉತ್ತರ ಕೊಡುತ್ತೇನೆ. ನಿಮಗೇನು ಬೇಕು?

ವಯೋಲ: ಕಾಂತಿಯುಕ್ತ, ಭವ್ಯ, ಅಪ್ರತಿಮ ಸುಂದರಿಯೇ! ಇವರೇ ಮನೆಯ ಒಡತಿಯೇನು ತಿಳಿಸಿ, ನಾನವರನ್ನು ಎಂದೂ ಕಂಡಿಲ್ಲ. ನನ್ನ ಮಾತನ್ನು ಬಿಸಾಡುವುದಕ್ಕೆ ನನಗಿಷ್ಟವಿಲ್ಲ; ಏಕೆಂದರೆ ಅದು ತುಂಬ ಸುಂದರವಾಗಿ ರಚಿತವಾಗಿದೆ, ಅಲ್ಲದೆ ಬಹಳ ಕಷ್ಟಪಟ್ಟು ನಾನದನ್ನು ಕಲಿತಿದ್ದೇನೆ. ಸುಂದರಿಯರೇ, ನನಗೆ ಯಾವ ಅನುಮಾನವಾಗುವುದೂ ಬೇಡ ; ಸ್ವಲ್ಪ ಅಸೌಜನ್ಯವನ್ನೂ ಸಹಿಸಲಾರದಷ್ಟು ಸೂಕ್ಷ್ಮ ನಾನು.

ಒಲಿವಿಯ: ನೀವೆಲ್ಲಿಂದ ಬಂದಿರಿ, ಸ್ವಾಮಿ?

ವಯೋಲ: ನಾನು ಕಲಿತಿರುವುದಕ್ಕಿಂತ ಹೆಚ್ಚಿಗೆ ಏನೂ ಹೇಳಲಾರೆ; ನೀವು ಕೇಳಿದ ಪ್ರಶ್ನೆ ನಾನು ಕಲಿತ ಭಾಗದಲ್ಲಿಲ್ಲ. ಸಭ್ಯಮೂರ್ತಿಯೇ, ನೀವೇ ಈ ಮನೆಯ ಒಡತಿ ಎಂಬುದನ್ನು ಖಾತರಿ ಮಾಡಿದರೆ, ನಾನು ನನ್ನ ಮಾತನ್ನು ಮುಂದುವರೆಸಬಹುದು.

ಒಲಿವಿಯ: ನೀವು ನಟರೇನು?

ವಯೋಲ: ಇಲ್ಲ, ನನ್ನ ಜೀವಜೀವಾಳ. ಆದರೂ ಕೇಡಿಗತನದ ವಿಷದ ಹಲ್ಲಿನ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ : ನಾನು ನಟಿಸುವ ವೇಷ ನಾನಲ್ಲ. ನೀವು ಈ ಮನೆಯ ಯಾಜಮಾನಿಯವರೇನು?

ಒಲಿವಿಯ: ನನ್ನನ್ನು ನಾನೇ ಹೊರದೂಡದಿದ್ದರೆ, ಹೌದು.

ವಯೋಲ: ಖಂಡಿತವಾಗಿ, ನೀವೇ ಅವರಾಗಿದ್ದರೆ, ನಿಮ್ಮನ್ನು ಹೊರದೂಡಿ ಕೊಳ್ಳುತ್ತಿದ್ದೀರಿ. ಏಕೆಂದರೆ, ಬೇರೆಯವರಿಗೆ ನೀವು ಏನನ್ನು ನೀಡಬೇಕಾಗಿದೆಯೇ ಅದನ್ನು ನಿಮ್ಮಲ್ಲಿಯೇ ಇಟ್ಟುಕೊಳ್ಳಬಾರದು. ಆದರೆ ಈ ವಿಷಯ ನನಗೆ ಹೊರತಾದುದು. ನಿಮ್ಮನ್ನು ಪ್ರಶಂಸಿಸುವ ನನ್ನ ಮಾತನ್ನು ಮುಂದುವರೆಸಿ, ಅನಂತರ ನನ್ನ ಸಂದೇಶದ

ಅಂತರಾಳವನ್ನು ತೋರಿಸುತ್ತೇನೆ.

ಒಲಿವಿಯ: ಅದರಲ್ಲಿ ಯಾವುದು ಮುಖ್ಯವೋ ಅದನ್ನು ಮಾತ್ರ ಹೇಳಿ. ನೀವೇನು ಪ್ರಶಂಸೆ ಮಾಡಬೇಕಾಗಿಲ್ಲ, ನಾನದನ್ನು ಮನ್ನಾ ಮಾಡುತ್ತಾನೆ.

ವಯೋಲ: ಅಯ್ಯೋ, ನಾನದನ್ನು ಕಲಿಯಲು ತುಂಬ ಕಷ್ಟಪಟ್ಟಿದ್ದೇನೆ ; ಅದು ಕಾವ್ಯರೂಪದಲ್ಲಿದೆ.

ಮರೀಯ: ಹಾಗಾದರೆ ಅದು ಪ್ರಾಮಾಣಿಕವಾಗಿಲ್ಲದ ಸಾಧ್ಯತೆಯಿದೆ. ದಯೆಯಿಟ್ಟು ಅದನ್ನು ನಿಮ್ಮಲ್ಲಿಯೇ ಇಟ್ಟುಕೊಳ್ಳಿ. ನಮ್ಮ ಬಾಗಿಲ ಹತ್ತಿರ ನೀವು ತುಂಬ ಉದ್ಧಟತನದಿಂದ ಮಾತನಾಡಿದಿರಂತೆ. ಅದಕ್ಕೋಸ್ಕರವೇ ನಿಮ್ಮ ಮಾತನ್ನು ಕೇಳುವುದಕ್ಕಿಂತ ಹೆಚ್ಚಾಗಿ ನೀವು ಯಾರಿರಬಹುದು ಅನ್ನೋ ಕುತೂಹಲದಿಂದ ಒಳಕ್ಕೆ ಬಿಡಲು ಹೇಳಿದ್ದು. ನಿಮಗೆ ಹುಚ್ಚುಗಿಚ್ಚು ಹಿಡಿದಿರದಿದ್ದರೆ, ಹೊರಟು ಹೋಗಿ. ವಿವೇಕದ ಮಾತುಗಳೇನಾದರೂ ಇದ್ದರೆ ಸಂಕ್ಷೇಪವಾಗಿ ಹೇಳಿ. ಈಗ ಕಾಡು ಹರಟೆಯಲ್ಲಿ ಕಾಲಕಳೆಯುವುದಕ್ಕೆ ನನ್ನ ತಲೆಯೇನೂ ಕೆಟ್ಟಿಲ್ಲ.

ಮರೀಯ: (ವಯೋಲಳ ಕೈಲಿರುವ ಹ್ಯಾಟಿನತ್ತ ತೋರಿಸಿ) ನಿಮ್ಮ ಹಡಗಿನ ಹಾಯಿ ಹಾರಿಸ್ತೀರೇನು ? ಈ ಕಡೆ ಬನ್ನಿ. (ಅವಳನ್ನು ಹೊರಗೆ ಅಟ್ಟಲು ಬಾಗಿಲು ತೆರೆಯುತ್ತಾಳೆ)

ವಯೋಲ: (ಪ್ರತಿಭಟನೆಯಿಂದ) ಇಲ್ಲಮ್ಮ, ಹಡಗು ತೊಳೆಯೋರೆ. ನಾನಿನ್ನೂ ಸ್ವಲ್ಪ ದೂರ ಸಮುದ್ರ ಪ್ರಯಾಣ ಮಾಡಬೇಕಾಗಿದೆ. ತಮ್ಮ ದೈತ್ಯ ದೇಹವನ್ನು ಸ್ವಲ್ಪ ಸಮಾಧಾನ ಮಾಡಿಕೊಳ್ಳಿ, ಮಧುರಮ್ಮ.

ಒಲಿವಿಯ: ನಿಮ್ಮ ಉದ್ದೇಶವೇನು ಹೇಳಿ ?

ವಯೋಲ: ನಾನೊಬ್ಬ ಓಲೆಕಾರ.

ಒಲಿವಿಯ: ಖಂಡಿತ, ಅದರ ಸೌಜನ್ಯವೇ ಇಷ್ಟೊಂದು ಭಯಂಕರವಾಗಿರುವಾಗ ನೀವು ಹೇಳಬೇಕಾದ ಸಂದೇಶ ಅದೆಷ್ಟು ಆಘಾತವನ್ನುಂಟುಮಾಡಬಹುದು ! ನೀವು ಬಂದ ಕೆಲಸ ಹೇಳಿ.

ವಯೋಲ: ಅದನ್ನು ನೀವು ಮಾತ್ರವೇ ಕೇಳಬೇಕಾದದ್ದು. ನಾನು ಯುದ್ಧ ಘೋಷಣೆಯ ವಾರ್ತೆಯನ್ನೂ ತಂದಿಲ್ಲ, ಪ್ರಭುತ್ವದ ಹೊರೆ ಹೊರಿಸುವುದಕ್ಕೂ ಬಂದಿಲ್ಲ. ನನ್ನ ಕೈಲಿ ಆಲಿವ್ ಹಿಡಿದಿದ್ದೇನೆ ; ನಾನು ಆಡುವ ಮಾತುಗಳು ಎಷ್ಟು ಪ್ರಶಾಂತವಾದವೋ ಅದರ ವಿಷಯವೂ ಅಷ್ಟೆ

ಒಲಿವಿಯ: ಆದರೂ ನೀವು ಒರಟುವರ್ತನೆಯಿಂದಲೇ ಆರಂಭಿಸಿದಿರಿ. ನೀವು ಯಾರು ? ನಿಮಗೇನು ಬೇಕು ?

ವಯೋಲ: ನನ್ನ ನಡತೆಯಲ್ಲಿ ಒರಟುತನ ಕಾಣಿಸಲು ಕಾರಣ ನನಗಿಲ್ಲಿ ಸಿಕ್ಕಿದ ಸ್ವಾಗತದ ರೀತಿ. ನಾನು ಯಾರು, ನನಗೆ ಬೇಕಾದದ್ದೇನು ಎನ್ನುವುದು ಕನ್ಯತ್ವದಂತೆಯೇ ರಹಸ್ಯಮಯವಾದವು. ನಿಮಗೆ ದೇವವಾಣಿಯ ಹಾಗೇ ಕೇಳಿಸುತ್ತದೆ ; ಬೇರೆಯವರಿಗೆ ದೈವನಿಂದೆಯ ಹಾಗೆ ಕೇಳಿಸುತ್ತದೆ.

ಒಲಿವಿಯ: ಇವರೊಡನೆ ನಾನೊಬ್ಬಳೇ ಇರಲು ಅವಕಾಶಕೊಡಿ. ಇವರು ಹೇಳುವ ದೈವವಾಣಿಯನ್ನು ಕೇಳೋಣ. (ಮರೀಯ ಮತ್ತು ಸೇವಕರು ಹೋಗುತ್ತಾರೆ) ಸ್ವಾಮಿ, ಈಗ ಹೇಳಿ ನಿಮ್ಮ ದಿವ್ಯ ಸಂದೇಶ ಏನು ?

ವಯೋಲ: ಅತ್ಯಂತ ಮಧುರ ಮಹಿಳೆ—

ಒಲಿವಿಯ: ಒಳ್ಳೆ ಅನುಕೂಲಸಿಂಧು ತತ್ವ, ಅದರ ಬಗ್ಗೆ ಬೇಕಾದಷ್ಟು ಹೇಳಬಹುದು. ನಿಮ್ಮ ದಿವ್ಯ ಸಂದೇಶವೆಲ್ಲಿ?

ವಯೋಲ: ಆರ್ಸಿನೋರ ಹೃದಯದಲ್ಲಿ.

ಒಲಿವಿಯ: ಅವರ ಹೃದಯದಲ್ಲಿ! ಅದರ ಎಷ್ಟನೇ ಅಧ್ಯಾಯದಲ್ಲಿ?

ವಯೋಲ: ಅದೇ ರೀತಿ ಹೇಳಬೇಕಾದರೆ, ಮೊದಲನೇ ಅಧ್ಯಾಯದಲ್ಲಿ.

ಒಲಿವಿಯ: ಓ ನಾನಾಗಲೇ ಅದನ್ನು ಓದಿದ್ದೇನೆ ; ಅದು ದೈವನಿಂದೆ. ನೀವು ಹೇಳಬೇಕಾದದ್ದು ಇನ್ನೇನೂ ಇಲ್ಲವೇನು ?

ವಯೋಲ: ದೇವಿ, ನಾನು ನಿಮ್ಮ ಮುಖವನ್ನು ನೋಡಬಹುದೇ ?

ಒಲಿವಿಯ: ನನ್ನ ಮುಖದೊಡನೆ ಏನಾದರೂ ಸಂಧಾನ ನಡೆಸಬೇಕೆಂದು ನಿಮ್ಮ

ಯಜಮಾನರು ಹೇಳಿಕಳಿಸಿದ್ದಾರೇನು ? ನಿಮ್ಮ ಗಮನವೀಗ ಪುಸ್ತಕದಿಂದ ದೂರವಾಗಿದೆ. ಆದರೂ ಮುಸುಕು ತೆಗೆದು ಮುಖವನ್ನು ತೋರಿಸುತ್ತೇನೆ. (ತೆರೆ ತೆಗೆದು) ನೋಡಿ, ಸ್ವಾಮಿ, ನಾನಿರೋ ಹಾಗಿರುವುದನ್ನು. ಚಿತ್ರ ಚೆನ್ನಾಗಿಲ್ಲವೇ ?

ವಯೋಲ: ತುಂಬ ಸುಂದರವಾಗಿದೆ, ಎಲ್ಲವನ್ನೂ ದೇವರೇ ಮಾಡಿರೋದಾದರೆ.

ಒಲಿವಿಯ: ಅದು ಸಹಜರೇಖೆಗಳಲ್ಲಿ ಮೂಡಿರುವುದು ಸ್ವಾಮಿ ; ಗಾಳಿ ಮಳೆಗಳನ್ನು ತಡೆಯಬಲ್ಲದು.

ವಯೋಲ: ಇದು ಹದವಾದ ಸೌದರ್ಯ.
ನಿಸರ್ಗದ ಮಧುರ ಪರಿಣತ ಹಸ್ತ
ಇಲ್ಲಿನ ಕೆಂಪು-ಬಿಳಿಪುಗಳನ್ನು ಲೇಪಿಸಿದೆ.
ದೇವಿ, ಈ ಚೆಲುವಿನ ಒಂದುಪ್ರತಿಯನ್ನೂ ಉಳಿಸದೆ
ಇದನ್ನು ನೀವು ಗೋರಿಯತ್ತ ದೂಡುವುದಾದರೆ
ಬದುಕಿರುವ ಹೆಣ್ಣುಗಳಲ್ಲಿ ನೀವು ಅತ್ಯಂತ ಕ್ರೂರಿಗಳು.

ಒಲಿವಿಯ: ಸ್ವಾಮಿ, ನಾನಷ್ಟು ಕ್ರೂರಳಾಗುವುದಿಲ್ಲ, ನನ್ನ ಸೌಂದರ್ಯದ ವಿವಿಧ ಅಂಶಗಳನ್ನು ಪ್ರಕಟಿಸಲು ಅವಕಾಶ ಕೊಡುತ್ತೇನೆ. ಸೌಂದರ್ಯಾಂಶಗಳನ್ನೆಲ್ಲ ಪಟ್ಟಿಮಾಡಿ ಅದರ ಪ್ರತಿಯೊಂದು ಅಂಶವನ್ನೂ ನನ್ನ ಉಯಿಲಿನೊಂದಿಗೆ ಲಗತ್ತಿಸೋದಕ್ಕೆ ವ್ಯವಸ್ಥೆಮಾಡಿಸುತ್ತೇನೆ. ಹೀಗೆ ; ಮೊದಲನೆಯದು, ಸಾಕಷ್ಟು ಕೆಂಪಾಗಿರುವ ತುಟಿಗಳೆರಡು ; ಎರಡನೆಯದು, ಎರಡು ಕಂದುಗಣ್ಣುಗಳು ಮತ್ತು ಅವುಗಳ ರೆಪ್ಪೆಗಳು ; ಒಂದು ಕತ್ತು, ಒಂದು ಗಲ್ಲ ಇತ್ಯಾದಿ. ಇದನ್ನು ಹೊಗಳುವುದಕ್ಕಾಗಿಯೇ ನಿಮ್ಮನ್ನಿಲ್ಲಿಗೆ ಕಳಿಸಿದ್ದಾರೇನು ?

ವಯೋಲ: ನಿಮ್ಮ ಸ್ವಭಾವ ಅರ್ಥವಾಯಿತು, ನಿಮಗೆ ತೀರ ಹೆಮ್ಮೆ;
ಹೀಗಿದ್ದರೂ, ನೀವು ಭೂತವಾಗಿದ್ದರೂ, ಚೆಲುವೆ.
ನಮ್ಮ ಪ್ರಭುಗಳು, ಒಡೆಯರು ನಿಮ್ಮನ್ನು ಪ್ರೀತಿಸುತ್ತಾರೆ.
ನೀವು ಅಸೀಮ ಸೌಂದರ್ಯದ ರಾಣಿಯೆನಿಸಿದ್ದರೂ
ಅಂಥ ಪ್ರೇಮಕ್ಕೆ ಓಗೊಡಬೇಕು.

ಒಲಿವಿಯ: ನನ್ನನ್ನವರು ಹೇಗೆ ಪ್ರೀತಿಸುತ್ತಾರೆ?

ವಯೋಲ: ಆರಾಧನೆಯಿಂದ, ಅಪಾರ ಕಣ್ಣೀರಿನಿಂದ,
ಪ್ರೇಮವನ್ನೇ ನಡುಗಿಸುವ ನರಳಿನಿಂದ,
ಉರಿವ ನಿಟ್ಟುಸಿರಿಂದ.

ಒಲಿವಿಯ: ನಿಮ್ಮ ಪ್ರಭುಗಳಿಗೆ ನನ್ನ ಮನಸ್ಸು ತಿಳಿದಿದೆ.
ನಾನವರನ್ನು ಪ್ರೀತಿಸಲಾರೆ.
ಆದರೂ ಅವರು ಸಭ್ಯರು, ಉದಾತ್ತರು, ಆಸ್ತಿವಂತರು,
ತಾಜಾ ಹಾಗೂ ಶುದ್ಧ ಯೌವನವಂತರು ಎಂದು ನಾ ಬಲ್ಲೆ;
ಅವರು ಜನರೆನ್ನುವಂತೆ ಉದಾರಿ, ಪಂಡಿತರು, ಶೂರರು;
ನಿಲವು ಹಾಗೂ ಆಕಾರಗಳಲ್ಲಿ ತೇಜಸ್ವಿಗಳು:
ಆದರೂ ನಾನವರನ್ನು ಪ್ರೀತಿಸಲಾರೆ.
ಈ ಉತ್ತರವನ್ನು ಹಿಂದೆಯೇ ಒಪ್ಪಬಹುದಿತ್ತು.

ವಯೋಲ: ಒಡೆಯರ ಔಜ್ವಲ್ಯದಿಂದ ನಿಮ್ಮನ್ನು ನಾನೊಲಿದಿದ್ದರೆ
ಅವರಂತೆ ವೇದನೆ, ಸಾವಿನ ಮಿಡಿತವನ್ನನುಭವಿಸಿದ್ದರೆ,
ನಿಮ್ಮ ತಿರಸ್ಕಾರದಲ್ಲಿ ನನಗಾವ ಅರ್ಥವೂ ಕಾಣುತ್ತಿರಲಿಲ್ಲ.
ಅದನ್ನು ಅರ್ಥಮಾಡಿಕೊಳ್ಳಲೂ ಹೋಗುತ್ತಿರಲಿಲ್ಲ.

ಒಲಿವಿಯ: ಏಕೆ? ನೀವೇನು ಮಾಡುತ್ತಿದ್ದಿರಿ?

ವಯೋಲ: ನಿಮ್ಮ ಬಾಗಿಲಲ್ಲಿ ರೆಂಬೆಗಳಿಂದ ಗುಡಿಸಲು ಕಟ್ಟಿ
ನನ್ನ ಚೇತನವನ್ನದರಲ್ಲಿ ವಾಸಿಸಲು ಆಹ್ವಾನಿಸುತ್ತಿದ್ದೆ.
ತಿರಸ್ಕೃತ ಪ್ರೇಮದ ಬಗ್ಗೆ ಹಾಡುಗಳನ್ನು ಕಟ್ಟಿ
ನೀರವ ರಾತ್ರಿಯಲ್ಲೂ ಜೋರಾಗಿ ಹಾಡುತ್ತಿದ್ದೆ.
ಪ್ರತಿಧ್ವನಿಸುವ ಬೆಟ್ಟಗುಡ್ಡಗಳಲ್ಲಿ ನಿಮ್ಮ ಹೆಸರು ಕೂಗಿ
ಪಿಸುಗುಡುವ ಗಾಳಿ ಕೂಡ 'ಒಲಿವಿಯಾ' ಎಂದು
ಗಟ್ಟಿಯಾಗಿ ಕಿರುಚುವಂತೆ ಮಾಡುತ್ತಿದ್ದೆ.
ಓ, ನನ್ನ ಮೇಲೆ ಕನಿಕರವಿಡದಿದ್ದರೆ, ಗಾಳಿ-ಭೂಮಿಗಳ
ನಡುವೆ ಶಾಂತಿಯಿಂದಿರದಂತೆ ನಿಮ್ಮನ್ನ ದೂಡುತ್ತಿದ್ದೆ.

ಒಲಿವಿಯ: ಹಾಗೇ ಮಾಡುತ್ತಿದ್ದಿರೇನೋ. ನಿಮ್ಮ ತಾಯ್ತಂದೆಯರಾರು?

ವಯೋಲ: ನಾನು ಅದೃಷ್ಟಕ್ಕೆ ಅತೀತನಾದವನು;

ಆದರೂ ನನ್ನದು ಒಳ್ಳೆಯ ಸ್ಥಿತಿಯೇ, ನಾನು ಕುಲೀನ.

ಒಲಿವಿಯ : ನೀವು ನಿಮ್ಮ ಒಡೆಯರ ಬಳಿಗೆ ಹೊರಡಿ.
ನಾನವರನ್ನು ಪ್ರೀತಿಸಲಾರೆ; ಅಕಸ್ಮಾತ್ ಮತ್ತೆ ಬಂದು
ಇದಕ್ಕವರ ಪ್ರತಿಕ್ರಿಯೆ ಹೇಗಿತ್ತೆಂದು ನೀವು
ತಿಳಿಸುವುದನ್ನು ಬಿಟ್ಟರೆ, ಬೇರಾರನ್ನೂ ಅವರು ಕಳಿಸದಿರಲಿ
ಒಳ್ಳೆಯದಾಗಲಿ ; ನೀವು ಪಟ್ಟ ತೊಂದರೆಗೆ
ನಾನು ಆಭಾರಿ, ಈ ಮೆಚ್ಚನ್ನು ತೆಗೆದುಕೊಳ್ಳಿ.
(ಹಣವನ್ನು ನೀಡುತ್ತಾಳೆ)

ವಯೋಲ : ದೇವಿ, ನಾನು ಕೂಲಿಯ ಓಲೆಕಾರನಲ್ಲ.
ಹಣ ನಿಮ್ಮಲ್ಲಿಯೇ ಇರಲಿ.
ಮೆಚ್ಚು ಬೇಕಾದದ್ದು ನಮ್ಮ ಒಡೆಯರಿಗೆ, ನನಗಲ್ಲ.
ನೀವು ಪ್ರೀತಿಸುವ ಪುರುಷನ ಹೃದಯವನ್ನೂ
ಮನ್ಮಥನು ಕಲ್ಲಾಗಿಸಿ ನಮ್ಮ ಒಡೆಯರಿಗೆ ಆದಂತೆ
ನಿಮ್ಮ ಪ್ರೇಮತೀವ್ರತೆಯೂ ತಿರಸ್ಕೃತವಾಗಲಿ.
ಅಮ್ಮ, ಕ್ರೂರಿ ಸುಂದರಿಯೇ ಬರುತ್ತೇನೆ. (ಹೋಗುತ್ತಾಳೆ)

ಒಲಿವಿಯ : 'ನಿಮ್ಮ ತಾಯ್ತಂದೆಯರಾರು ?'
'ನಾನು ಅದೃಷ್ಟಕ್ಕೆ ಅತೀತನಾದವನು ;
ಆದರೂ ನನ್ನದು ಒಳ್ಳೆಯ ಸ್ಥಿತಿಯೇ, ನಾನು ಕುಲೀನ.'
ನಿಜವೆಂದು ನಾನು ಪ್ರಮಾಣಮಾಡುತ್ತೇನೆ.
ನಿಮ್ಮ ಮಾತು, ಮುಖ, ಕೈಕಾಲು, ಚಲನೆ, ಆವೇಶಗಳು
ನಿಮ್ಮನ್ನು ಹಾಗೆಂದು ಅಡಿಗಡಿಗೂ ಸಾರಿಹೇಳುತ್ತವೆ.
ತೀರ ಆತುರಬೇಡ ; ನಿಧಾನ, ನಿಧಾನ.
ಒಡೆಯನೇ ಓಲೆಕಾರನಾಗಿರದಿದ್ದರೆ.... (ಯೋಚಿಸುತ್ತಾಳೆ)
ಹೀಗೇಕೆ ? ಇಷ್ಟು ಬೇಗ ಅಂಟುವುದೆ ಈ ಸೋಂಕು ?
ಅರಿವಿಗೇ ಬರದಂತೆ ಸೂಕ್ಷ್ಮ ರೀತಿಯಲ್ಲಿ
ಈ ಯುವಕನ ಗುಣಗಳೆಲ್ಲ ಸಂಪೂರ್ಣವಾಗಿ
ನನ್ನ ಕಣ್ಣಲ್ಲಿ ಹೊಕ್ಕಂತೆ ಭಾಸವಾಗುತ್ತಿದೆ ನನಗೆ.
ಹ್ಞೂ, ಇರಲಿ ; ಮಾಲ್ವೋಲಿಯೋ ಇದ್ದೀರಾ ?
(ಮಾಲ್ವೋಲಿಯೋ ವಾಪಸ್ಸು ಬರುತ್ತಾನೆ)

ಮಾಲ್ವೋಲಿಯೊ : ಬಂದೆ ತಾಯಿ, ಅಪ್ಪಣೆಯಾಗಲಿ.

ಒಲಿವಿಯ : ಕೌಂಟ್‌ನ ಕಡೆಯ ಆ ಮುಂಗೋಪಿ ಓಲೆಕಾರನನ್ನು
ಹಿಂಬಾಲಿಸಿ. ಅವನು ತನ್ನ ಉಂಗುರವನ್ನಿಲ್ಲಿ
ನನಗಿಷ್ಟವಿರದಿದ್ದರೂ ಬಿಟ್ಟು ಹೋಗಿದ್ದಾನೆ;
ನಾನಿದನ್ನು ಸ್ವೀಕರಿಸಲಾರೆ.
ತನ್ನ ಒಡೆಯರ ಬಳಿ ನನ್ನ ಹೊಗಳುವುದಾಗಲೀ
ಅವರಿಗೆ ಆಸೆಯುಂಟುಮಾಡುವುದಾಗಲೀ ನನಗಿಷ್ಟವಿಲ್ಲ,
ನಾನವರನ್ನು ಒಲ್ಲೆ ಎಂದು ಅವನಿಗೆ ತಿಳಿಸು.
ಆ ಯುವಕ ನಾಳೆ ಈ ಕಡೆ ಬಂದಾಗ ಅವನಿಗೆ
ಇದರ ಕಾರಣವನ್ನು ಹೇಳುತ್ತೇನೆ, ಹೊರಡಿ,
ಮಾಲ್ವೋಲಿಯೋ.

ಮಾಲ್ವೋಲಿಯೊ : ಇದೊ ಹೊರಟೆ, ತಾಯಿ. (ಆತುರದಿಂದ ಹೋಗುತ್ತಾನೆ)

ಒಲಿವಿಯ : ನನಗೆ ಏನೊಂದು ತಿಳಿಯದಾಗಿದೆ, ನನ್ನ ಕಣ್ಣುಗಳು
ಸೌಂದರ್ಯದ ಭೂತಗನ್ನಡಿಯೇನೋ ಎನ್ನಿಸುತ್ತಿದೆ.
ವಿಧಿಯೇ, ನಿನ್ನ ಶಕ್ತಿಯನ್ನು ತೋರಿಸು;
ನಮ್ಮ ಒಡೆಯರು ನಾವೇ ಅಲ್ಲ.
ಏನಾಗಬೇಕೋ ಅದೇ ಆಗುವುದು; ಇದೂ ಹಾಗೆಯೇ ಆಗಲಿ.
(ಹೋಗುತ್ತಾಳೆ)

--------

ಎರಡನೇ ಅಂಕ

## ದೃಶ್ಯ ಒಂದು

ಆಂಟೋನಿಯೋ ಮನೆಯ ಬಾಗಿಲ ಹತ್ತಿರ

(ಆಂಟೋನಿಯೋ ಮತ್ತು ಸೆಬಾಸ್ಟಿಯನ್ ಬರುತ್ತಾರೆ)

ಆಂಟೋನಿಯೊ : ಇನ್ನೂ ಸ್ವಲ್ಪಕಾಲ ನೀವು ನಿಲ್ಲುವುದಿಲ್ಲವೇನು ? ಅಲ್ಲದೆ ನಿಮ್ಮ ಜೊತೆಗೆ ಬರುವುದಕ್ಕೂ ನನಗೆ ಅವಕಾಶ ಕೊಡುವುದಿಲ್ಲವೇ ?

ಸೆಬಾಸ್ಟಿಯನ್ : ದಯವಿಟ್ಟು ಕ್ಷಮಿಸಿ, ಆಗುವುದಿಲ್ಲ. ನನ್ನ ನಕ್ಷತ್ರಗಳು ನನ್ನ ಮೇಲೆ ಕ್ರೂರವಾಗಿವೆ. ನನ್ನ ಅದೃಷ್ಟದ ಕ್ರೌರ್ಯ ನಿಮ್ಮದರ ಮೇಲೆ ಕೆಟ್ಟ ಪರಿಣಾಮವನ್ನು ಬೀರಬಹುದು. ಆದ್ದರಿಂದ ನನ್ನನ್ನು ದಯವಿಟ್ಟು ಬೀಳ್ಕೊಡಿ; ನನಗೆ ಬರುವ ದುಃಸ್ಥಿತಿಗಳನ್ನು ನಾನೇ ಎದುರಿಸುತ್ತೇನೆ. ಅವುಗಳನ್ನು ನಿಮ್ಮ ಮೇಲೆಯೂ ಹೇರುವುದೆಂದರೆ ನಿಮ್ಮ ಪ್ರೀತಿಗೆ ಕೆಟ್ಟ ಪ್ರತಿಫಲ ನೀಡಿದಂತೆ.

ಆಂಟೋನಿಯೊ : ನೀವು ಎಲ್ಲಿಗೆ ಹೋಗುತ್ತೀರೆಂಬುದನ್ನು ನನಗೆ ತಿಳಿಸಲಿಲ್ಲವಲ್ಲ.

ಸೆಬಾಸ್ಟಿಯನ್ : ಖಂಡಿತ ಬೇಡ, ಸ್ವಾಮಿ. ನಾನು ಹೊರಡಬೇಕೆಂದಿರುವ ಪ್ರವಾಸ ನಿಶ್ಚಿತ ಗುರಿಯಿಲ್ಲದ ಅಲೆದಾಟ, ಅಷ್ಟೆ. ನಿಮ್ಮ ಸೌಜನ್ಯವನ್ನು ನೋಡಿದರೆ ನಾನು ಇಷ್ಟಪಡದಿರೋದನ್ನ ನೀವು ನನ್ನಿಂದ ಹೇಳಿಸೋಕೆ ಪ್ರಯತ್ನಿಸೋದಿಲ್ಲ ಅನ್ನೋದು ತಿಳಿಯುತ್ತೆ ; ಅದಕ್ಕೇ ನನ್ನ ಕೆಲವು ವಿಷಯಗಳನ್ನು ನಿಮಗೆ ಹೇಳಬೇಕೆನ್ನಿಸುತ್ತದೆ. ನನ್ನ ನಿಜವಾದ ವಿಷಯವನ್ನು ಕೇಳಿ. ನಾನು ನಿಮಗೆ ಹಿಂದೆ ಹೇಳಿದ್ದಂತೆ ನನ್ನ ಹೆಸರು ರೊಡೆರಿಗೋ ಅಲ್ಲ, ಸೆಬಾಸ್ಟಿಯನ್ ಅಂತ. ನನ್ನ ತಂದೆ ಮೆಸಲೀನ್ ನಗರದ ಸೆಬಾಸ್ಟಿಯನ್ ; ನೀವು ಅವರ ಹೆಸರನ್ನು ಕೇಳಿರಬಹುದು. ಅವರು ನನ್ನ ಮತ್ತು ನನ್ನ ತಂಗೀನ ಬಿಟ್ಟು ಹೊರಟುಹೋದರು. ನಾವಿಬ್ಬರೂ ಒಂದು ಸಮಯದಲ್ಲಿ ಹುಟ್ಟಿದವರು. ದೇವರ ದಯೆ ಇದ್ದಿದ್ದರೆ ನಾವಿಬ್ಬರೂ ಹಾಗೇ ತೀರಿಕೊಳ್ಳಲೂಬಹುದಿತ್ತು. ಆದರೆ, ಸ್ವಾಮಿ, ನೀವದನ್ನು ತಪ್ಪಿಸಿದಿರಿ; ಸಮುದ್ರದ ಅಲ್ಲೋಲ ಕಲ್ಲೋಲದಿಂದ ನೀವು ನನ್ನನ್ನು

ಪಾರು ಮಾಡಿದ ಒಂದು ಗಂಟೆಗೆ ಮುಂಚೆ ನನ್ನ ತಂಗಿ ಮುಳುಗಿಹೋದಳು.

ಆಂಟೋನಿಯೊ : ಅಯ್ಯೋ, ದುರ್ದಿನವೇ!

ಸೆಬಾಸ್ಟಿಯನ್ : ಅವಳು ನನ್ನ ಹಾಗೇ ಇದ್ದಳು ಅಂತ ಕೆಲವರು ಹೇಳಿದರೂ, ಅವಳು ಸುಂದರಿಯೆಂದೇ ಹಲವರ ಅಭಿಪ್ರಾಯವಾಗಿತ್ತು. ಅಂತಹ ಆಶ್ಚರ್ಯದ ಹೊಗಳಿಕೆಯನ್ನು ನಂಬೋಕೆ ನನಗೆ ಸಾಧ್ಯವಾಗುವುದಿಲ್ಲವಾದರೂ ಇಷ್ಟನ್ನು ಮಾತ್ರ ಧೈರ್ಯವಾಗಿ ಹೇಳಬಲ್ಲೆ; ಅವಳ ಮನಸ್ಸು ಒಳ್ಳೆಯದಲ್ಲ ಅಂತ ಯಾವ ಶತ್ರುವೂ ಹೇಳಲಾರ. ಅವಳಾಗಲೇ ಈ ಉಪ್ಪುನೀರಿನಲ್ಲಿ ಮುಳುಗಿಹೋಗಿದ್ದಾಳೆ, ಆದರೆ ಇನ್ನೊಂದಷ್ಟು ಉಪ್ಪುನೀರಲ್ಲಿ ನಾನವಳ ನೆನಪನ್ನು ಮುಳುಗಿಸುತ್ತೇನೇಂತ ಕಾಣುತ್ತೆ.

ಆಂಟೋನಿಯೊ : ನಾನು ನಿಮಗೆ ತೊಂದರೆಕೊಟ್ಟೆ, ಕ್ಷಮಿಸಿ.

ಸೆಬಾಸ್ಟಿಯನ್ : ಓ ಒಳ್ಳೆ ಆಂಟೋನಿಯೋ : ನಿಮಗೆ ಕೊಟ್ಟ ತೊಂದರೆಗಾಗಿ ನೀವು ನನ್ನನ್ನ ಕ್ಷಮಿಸಬೇಕು.

ಆಂಟೋನಿಯೊ : ನಾನು ನಿಮ್ಮ ಸೇವೆ ಮಾಡೋದಕ್ಕೆ ಅವಕಾಶ ಕೊಡಬೇಕು ; ಇಲ್ಲದಿದ್ದರೆ ನಾನು ನಿಮ್ಮ ಮೇಲೆ ಪ್ರೀತಿ ಇಟ್ಟಿದ್ದಕ್ಕೋಸ್ಕರ ನೀವು ನನ್ನನ್ನು ಕೊಂದ ಹಾಗಾಗುತ್ತೆ.

ಸೆಬಾಸ್ಟಿಯನ್ : ನೀವು ಮಾಡಿದ ಕೆಲಸವನ್ನ ನೀವೇ ಹಾಳುಮಾಡೋ ಇಷ್ಟ ನಿಮಗಿಲ್ಲದಿದ್ದರೆ, ಅಂದರೆ ನೀವು ಬದುಕಿಸಿದವನನ್ನು ನೀವೇ ಕೊಲ್ಲಕ್ಕೆ ಇಷ್ಟವಿಲ್ಲದಿದ್ದರೆ, ಇದನ್ನು ನೀವು ಬಯಸಬಾರದು. ಒಳ್ಳೆಯದು, ಈ ಕ್ಷಣ ಹೊರಟೆ. ನನ್ನ ಹೃದಯದ ತುಂಬ ಪ್ರೀತಿ ತುಂಬಿದೆ. ಆದರೆ ನಡತೆಯಲ್ಲಿ ನನ್ನ ತಾಯಿಯ ಹಾಗೆಯೇ ನನ್ನದು ಹೆಂಗರುಳು. ಅತಿ ಚಿಕ್ಕ ಪ್ರಸಂಗದಲ್ಲಿಯೂ ನನ್ನ ಕಣ್ಣುಗಳು ಒಳಗಿನ ಕತೆಯನ್ನೆಲ್ಲ ಹೇಳುತ್ತವೆ. (ಅವರು ಪರಸ್ಪರ ಕೈ ಹಿಡಿದು ಕೊಳ್ಳುತ್ತಾರೆ) ನಾನು ಕೌಂಟ್ ಆರ್ಸಿನೋರ ಆಸ್ಥಾನಕ್ಕೆ ಹೋಗಬೇಕು. ಒಳ್ಳೆಯದಾಗಲಿ. (ಹೋಗುವನು)

ಆಂಟೋನಿಯೊ : ಎಲ್ಲ ದೇವತೆಗಳ ಕೃಪೆಯೂ ನಿನ್ನೊಡನಿರಲಿ!
ಆರ್ಸಿನೋರ ಆಸ್ಥಾನದಲ್ಲಿ ನನಗೆ ಅನೇಕ ಶತ್ರುಗಳು,

ಇಲ್ಲದಿದ್ದರೆ ನಾನು ನಿಮ್ಮನ್ನು ಇಷ್ಟರಲ್ಲೇ ಅಲ್ಲಿ ಕಾಣುತ್ತಿದ್ದೆ.
ಆದರೂ ಬಂದದ್ದು ಬರಲಿ, ನನಗೆ ನೀನೆಂದರೆ ಪೂಜ್ಯ.
ಆದ್ದರಿಂದ ನನಗೆ ಅಪಾಯವೆಂದರೆ ಆಟ, ನಾನೂ ಬರುತ್ತೇನೆ.
(ಅವನು ಒಳಗೆ ಹೋಗುವನು)

## ದೃಶ್ಯ ಎರಡು

ಒಲಿವಿಯ ಮನೆಯ ಹತ್ತಿರದ ಒಂದು ಬೀದಿ
(ವಯೋಲ ಬರುತ್ತಾಳೆ, ಮಾಲ್ವೋಲಿಯೋ ಹಿಂಬಾಲಿಸುತ್ತಾನೆ)

ಮಾಲ್ವೋಲಿಯೊ: (ಹತ್ತಿರ ಬಂದು) ನೀವು ಇದೇ ತಾನೆ ಕೌಂಟೆಸ್ ಒಲಿವಿಯ ಅವರೊಡನೆ ಇದ್ದಿರಲ್ಲವೇ ?

ವಯೋಲ: ಹೌದು, ಸ್ವಾಮಿ, ಈಗ ಅಲ್ಲಿದ್ದೆ. ಸುಮಾರಾದ ನಡಿಗೆಯಲ್ಲಿ ಈಗ ಇಲ್ಲಿಗೆ ಬಂದಿದ್ದೇನೆ.

ಮಾಲ್ವೋಲಿಯೊ: (ಹರಿತವಾಗಿ) ಆಕೆ ನಿಮಗೆ ಈ ಉಂಗುರವನ್ನು ಹಿಂದಕ್ಕೆ ಕೊಟ್ಟಿದ್ದಾರೆ, ಸ್ವಾಮಿ. ನೀವೇ ಇದನ್ನು ತೆಗೆದುಕೊಂಡು ಬಂದಿದ್ದರೆ ನಂಗೆ ತೊಂದರೆ ತಪ್ಪುತ್ತಿತ್ತು. ಅಲ್ಲದೆ ಅವರು ಹೇಳಿದರು : ಅವರ ಬಗ್ಗೆ ನೀವು ನಿಮ್ಮ ಒಡೆಯರಿಗೆ ಯಾವ ಆಸೇನೂ ಇಟ್ಟುಕೋಬಾರದೂಂತ ಮನವರಿಕೆ ಮಾಡಿಸಬೇಕಂತೆ. ಇನ್ನೂ ಒಂದು ವಿಚಾರ: ಈ ವಿಷಯಕ್ಕೆ ನಿಮ್ಮ ಒಡೆಯರು ಏನು ಪ್ರತಿಕ್ರಿಯೆ ತೋರಿಸಿದರು ಅನ್ನೋದನ್ನ ತಿಳಿಸೋದಕ್ಕೆ ಹೊರತು, ಅವರ ಪರವಾಗಿ ನೀವು ಇನ್ನೊಂದು ಸಲ ಬರೋ ಧೈರ್ಯ ತೋರಿಸಬಾರದಂತೆ. (ಉಂಗುರವನ್ನು ಕೊಡುತ್ತಾನೆ) ತೆಗೆದುಕೊಳ್ಳಿ.

ವಯೋಲ: ಅವರು ನನ್ನಿಂದ ಉಂಗುರವನ್ನು ತೆಗೆದುಕೊಂಡರು. ಈಗ ಅದು ನನಗೆ ಬೇಡ.

ಮಾಲ್ವೋಲಿಯೊ: ಬನ್ನಿ ಸ್ವಾಮಿ, ಇಲ್ಲಿ, ನೀವಿದನ್ನ ಅವರ ಕಡೆ ಕೋಪದಿಂದ ಎಸೆದಿರಲ್ಲ, ಅದಕ್ಕೆ ಇದನ್ನು ನಿಮಗೆ ವಾಪಸ್ಸು ಮಾಡಬೇಕೂಂತ ಅವರ ಇಷ್ಟ. (ಅವನು ಅವಳತ್ತ ಉಂಗುರವನ್ನೆಸೆಯುತ್ತಾನೆ) ಬಗ್ಗಿ ತೆಗೆದುಕೊಳ್ಳೋ ಅಷ್ಟು ಅದು ಬೆಲೆ ಬಾಳೋದಾದರೆ, ಅಗೋ ಅದು ಅಲ್ಲಿ ಬಿದ್ದಿದೆ,

ತೆಗೆದುಕೊಳ್ಳಿ. ಇಲ್ಲದಿದ್ದರೆ ಯಾರಾದ್ರೂ ಕಂಡವರು ತೆಗೆದುಕೋತಾರೆ.

(ಹೊರಟು ಹೋಗುತ್ತಾನೆ)

ವಯೋಲ: ನಾನು ಆಕೆಯ ಬಳಿ ಯಾವ ಉಂಗುರವನ್ನೂ ಬಿಡಲಿಲ್ಲ,
ಅವರ ಉದ್ದೇಶವೇನಿರಬಹುದು ?
ನನ್ನ ಈ ವೇಷ ಅವರನ್ನಾಕರ್ಷಿಸದಿದ್ದರೆ ಸಾಕು, ದೇವರೇ!
ನನ್ನನ್ನವರು ಚೆನ್ನಾಗಿ ನೋಡಿದರು, ಎಷ್ಟೆಂದರೆ
ಅವರ ಕಣ್ಣಿನಿಂದಾಗಿ ನಾಲಗೆ ಉಡುಗಿದಂತೆ ಕಾಣಿಸಿತು,
ಏಕೆಂದರೆ ಮಾತು ಆವೇಶದಿಂದ ಅಸಂಬದ್ಧವಾಯ್ತು.
ಅವರು ನನ್ನ ಪ್ರೀತಿಸುವುದು ಖಂಡಿತ. ಅವರ ಜಾಣ್ಮೆಯ ಪ್ರೀತಿ
ಈ ಅಸಭ್ಯ ದೂತನನ್ನ ಕಳಿಸಿ ನನ್ನನ್ನಾಹ್ವಾನಿಸಿದೆ.
ಒಡೆಯರ ಉಂಗುರ ನನಗೆ ಬೇಡ! ಆದರೆ
ಅವರು ಯಾವ ಉಂಗುರವನ್ನೂ ಕಳುಹಿಸಿರಲಿಲ್ಲ!
ಅವರ ಪ್ರೀತಿಯ ಪುರುಷ ನಾನೇ. ಇದು ನಿಜವಾದರೆ,
ಆ ಬಡಪಾಯಿ ಕನಸನ್ನೇ ಪ್ರೀತಿಸಿದ್ದರೆ ಚೆನ್ನಾಗಿತ್ತು.
ಮಾರುವೇಷವೇ, ನೀನು ನೀಚತನವೆಂಬುದು ತಿಳಿಯಿತು.
ಇದರಲ್ಲಿ ಸೇರಿರುವ ಶತ್ರು ಮತ್ತಷ್ಟು ಕಾಡಿಸಬಲ್ಲ.
ಹೆಂಗಸರ ಮೇಣದಂಥ ಹೃದಯಗಳಲ್ಲಿ ತನ್ನ ಅಚ್ಚೊತ್ತುವುದು
ತೋರಿಕೆಯ ಸುಂದರನಿಗೆ ಅದೆಷ್ಟು ಸುಲಭ!
ಅಯ್ಯೋ, ಇದಕ್ಕೆ ಕಾರಣ ನಾವಲ್ಲ, ನಮ್ಮ ದೌರ್ಬಲ್ಯ.
ನಮ್ಮ ಸ್ವಭಾವಕ್ಕನುಗುಣವಾಗಿ ನಾವು ನಡೆಯುತ್ತೇವೆ.
ಇದರ ಕೊನೆ ಹೇಗೆ? ಒಡೆಯರಿಗೆ ಇವರೆಂದರೆ ಪ್ರಾಣ,
ಬಡಪಾಯಿ ವ್ಯಂತರ ನನಗೋ ಅವರಲ್ಲಿ ಅಷ್ಟೇ ಪ್ರೀತಿ.
ತಪ್ಪು ತಿಳಿದು, ಆಕೆ ನನ್ನಿಂದ ಮೋಹಭ್ರಾಂತರಾಗುವಂತಿದೆ:
ಇವೆಲ್ಲದರ ಪರ್ಯವಸಾನ ಹೇಗೆ? ನಾನೀಗ ಗಂಡಾಗಿ,
ಒಡೆಯರ ಪ್ರೀತಿ ಪಡೆಯುವ ನನ್ನ ಸ್ಥಿತಿ ಹತಾಶವಾಗಿದೆ.
ನಾನು ಹೆಣ್ಣಾದ್ದರಿಂದ, ಅಯ್ಯೋ ದೌರ್ಭಾಗ್ಯವೇ,
ಬಡಪಾಯಿ ಒಲಿವಿಯ ಎಷ್ಟು ವ್ಯರ್ಥ ನಿಟ್ಟುಸಿರನ್ನು ಬಿಡಬೇಕೊ!
ಓ ಕಾಲ, ನೀನೇ ಇದನ್ನು ಬಿಡಿಸಬೇಕು, ನಾನಲ್ಲ.

ಬಿಡಿಸಲಾರದ ಕಗ್ಗಂಟಾಗಿದೆ ಇದು, ನನಗೆ.

(ಅವಳು ಹೋಗುತ್ತಾಳೆ)

## ದೃಶ್ಯ ಮೂರು

ಒಲಿವಿಯಳ ಮನೆಯ ಒಂದು ಕೋಣೆ ; ಒಂದು ಬೆಂಚು ಮತ್ತು ನೀರು-ತಿಂಡಿಗಳಿರುವ ಒಂದು ಮೇಜು.

(ಸರ್ ಟೋಬಿ ಬೆಲ್ಚ್ ಮತ್ತು ಸರ್ ಆಂಡ್ರ್ಯೂ ಅಗ್ಯುಚೀಕ್ ಕುಡಿದು ಬರುತ್ತಾರೆ).

ಸರ್ ಟೋಬಿ : (ಮೇಜಿನ ಮೇಲೆ ಕುಳಿತು) ಹತ್ತಿರ ಬಾ, ಸರ್ ಆಂಡ್ರ್ಯೂ. (ಸರ್ ಆಂಡ್ರ್ಯೂ ಪ್ರಯಾಸದಿಂದ ಬರುತ್ತಾನೆ) ಮಧ್ಯರಾತ್ರಿ ಆದಮೇಲೆ ಮಲಗಿಕೊಳ್ಳದೇ ಇರೋದು ಅಂದ್ರೆ ಬೆಳಿಗ್ಗೆ ಬೇಗ ಎದ್ದ ಹಾಗೇನೇ. ಗೊತ್ತಿಲ್ಲ ನಿನಗೆ - ''ಪ್ರಾತಃ ಕಾಲೇ ಕುಸುಮಿತಸಮಯೇ...''

ಸರ್ ಆಂಡ್ರ್ಯೂ : (ಅವನ ಪಕ್ಕದಲ್ಲಿ ಕುಳಿತು) ಇಲ್ಲ, ನಿಜವಾಗಿ ನನಗೆ ಗೊತ್ತಿಲ್ಲ. ಆದರೆ ತಡವಾಗಿ ಏಳೋದು ಅಂದ್ರೆ ತಡವಾಗಿ ಏಳೋದು ಅಂತ ಮಾತ್ರ ನನಗೆ ಗೊತ್ತು.

(ತಿನ್ನುತ್ತಾನೆ)

ಸರ್ ಟೋಬಿ : (ಪಾತ್ರೆಯೊಂದನ್ನು ತೆಗೆದುಕೊಂಡು ಅದು ಖಾಲಿಯಾಗಿರುವುದನ್ನು ನೋಡಿ) ತಪ್ಪು ತೀರ್ಮಾನ ಅದು ; ಹೆಂಡವಿಲ್ಲದೆ ಖಾಲಿಯಾಗಿರೋ ಪಾತ್ರೆ ಹಾಗೇನೇ ಅದನ್ನೂ ನಾನು ದ್ವೇಷಿಸ್ತೇನೆ. ಮಧ್ಯರಾತ್ರೀವರೆಗೂ ಎಚ್ಚರವಾಗಿದ್ದು ಆಮೇಲೆ ಮಲಗೋದು ಬೇಗ ಮಲಗಿದ ಹಾಗೇನೇ. ಆದ್ದರಿಂದ ಮಧ್ಯರಾತ್ರಿ ಆದಮೇಲೆ ಮಲಗೋದು ಅಂದ್ರೆ ಸರಿಯಾದ ಹೊತ್ತಿಗೆ ಮಲಗೋ ಹಾಗೇ. ನಮ್ಮ ಜೀವನ ಪಂಚಭೂತಗಳಿಂದಾದದ್ದು ಅಲ್ಲವೇ ?

ಸರ್ ಆಂಡ್ರ್ಯೂ : (ಬಾಯಿ ತುಂಬ) ಖಂಡಿತ ಹಾಗಂತಾರೆ. ಆದರೆ ಅದು ತಿನ್ನೋದು ಕುಡಿಯೋದರಿಂದ ತುಂಬಿದೆ ಅನ್ನೋದು ಸರಿ ಅನ್ಸುತ್ತೆ.

ಸರ್ ಟೋಬಿ : ನೀನೊಬ್ಬ ಪಂಡಿತ ; ಆದ್ದರಿಂದ ನಾವು ತಿಂದು ಕುಡಿದು ಮಾಡೋಣ. (ಕೂಗುತ್ತ) ಮರೀಯ, ಇನ್ನೊಂದು ಕಪ್ಪು ವೈನು !

(ನಕಲಿ ಬರುತ್ತಾನೆ)

ಸರ್ ಆಂಡ್ರ್ಯೂ : ಖಂಡಿತ, ಇಲ್ಲಿ ಬರ್ತಿರೋನು ನಕಲೀನೇ.

ನಕಲಿ : (ಬೆಂಚಿನ ಮೇಲೆ ಅವರಿಬ್ಬರ ನಡುವೆ ಕುಳಿತು) ಏನು ಸಮಾಚಾರ ಪ್ರಿಯಬಂಧುಗಳೇ ? 'ನಾವು ಮೂವರು' ಚಿತ್ರವನ್ನು ನೋಡಲೇ ಇಲ್ಲ ಅಲ್ಲವೇ ?

ಸರ್ ಟೋಬಿ : ಕತ್ತೆಗೆ ಸ್ವಾಗತ. ನಾವೆಲ್ಲ ಸೇರಿ ನರ್ತಿಸೋಣ.

ಸರ್ ಆಂಡ್ರ್ಯೂ : ನಿಜವಾಗಿಯೂ ನಕಲೀಗೆ ಒಳ್ಳೆ ಇಂಪಾದ ಕಂಠ ಇದೆ. ನನ್ನ ಹತ್ರ ನಲವತ್ತು ಷಿಲಿಂಗ್ ಇರೋದಾದ್ರೆ, ಅದರ ಬದಲು ನಕಲೀಗಿರೋ ಅಂಥ ಕಾಲು, ಇಂಪಾದ ಕಂಠ ಇದ್ರೆ ಚೆನ್ನ ಅನ್ನಿಸ್ತೆ. ನೀನು ನಿನ್ನೆ ರಾತ್ರಿ ಹೇಳಿದ ಪಿಗ್ರೋಗ್ರಾಮಿಟಸ್ ಕತೆ, ವೇಪಿಯನ್‌ರು ಕ್ವೆಬಸ್‌ನ ಭೂಮಧ್ಯರೇಖೆ ಮೂಲಕ ಹಾದುಹೋದ ಕತೆ ಇವೆಲ್ಲ ಅದ್ಭುತವಾಗಿತ್ತು, ನಿಜವಾಗೂ ಚೆನ್ನಾಗಿತ್ತು. ನಿನ್ನ ಪ್ರಿಯೆಗೆ ಕೊಡೋದಕ್ಕೆ ಅಂತ ನಾನು ಆರು ಪೆನ್ಸ್ ಕಳ್ಸಿದೆ, ತೊಗೊಂಡೆಯೆ?

ನಕಲಿ : ನೀನು ಕೊಟ್ಟ ಬಕ್ಷೀಸನ್ನ ನಾನೇ ಇಟ್ಟುಕೊಂಡೆ. ಇಲ್ಲದಿದ್ರೆ ಮಾಲ್ವೋಲಿಯೋ ಬರ್ತಾನೆ – ಕರಡಿ ಬಂದ್ಹಾಗೆ. ನಮ್ಮ ಒಡತಿ ನಿರ್ಮಲವಾದೋರು, ಅಲ್ಲದೆ ನಾನು ಹೋಗೋದೇನು ಕಂತ್ರಿ ಸಾರಾಯಿ ಅಂಗಡೀಗಲ್ಲ.

ಸರ್ ಆಂಡ್ರ್ಯೂ : ಬಹಳ ಒಳ್ಳೇದು ! ಎಲ್ಲ ಹೇಳಿದ ಮೇಲೆ ಇದು ನಿಜವಾಗಿ ಸೊಗಸಾದ ತಮಾಷೆ. ಈಗ, ಎಲ್ಲಿ ಒಂದು ಹಾಡು ಹೇಳು ನೋಡೋಣ.

ಸರ್ ಟೋಬಿ : ಬಾ, ನಿಂಗೆ ಆರು ಪೆನ್ಸ್ ಕೊಡ್ತೀನಿ. ಒಂದು ಹಾಡು ಹೇಳು.

ಸರ್ ಆಂಡ್ರ್ಯೂ : ನಾನೂ ಆರು ಪೆನ್ಸ್ ಕೊಡ್ತೀನಿ. ಒಬ್ಬ ನೈಟ್ ನಿನಗೆ ಅದನ್ನು ಕೊಡ್ತಾನೆ ಅಂದ್ರೆ —

ನಕಲಿ : ನಿಮಗೆ ಪ್ರೇಮಗೀತೆ ಬೇಕೋ ಭಕ್ತಿಗೀತೆ ಬೇಕೋ ?

ಸರ್ ಟೋಬಿ : ಪ್ರೇಮಗೀತೆ, ಪ್ರೇಮಗೀತೆ.

ಸರ್ ಆಂಡ್ರ್ಯೂ : ಹೌದು, ಹೌದು, ಭಕ್ತಿಗಿಕ್ತಿ ಬೇಡಪ್ಪ.

ನಕಲಿ : (ಹಾಡುತ್ತಾನೆ) ಓ ನನ್ನ ಪ್ರಿಯತಮೇ ಅಲೆಯುತಿಹೆ ನೀನೆಲ್ಲಿ?

ಓ ನಿಂತು ಕೇಳು, ನಿಜವಾದ ಪ್ರಿಯನು ಕಾದಿಹನಿಲ್ಲಿ
ಎತ್ತರದ ಕುಗ್ಗಿರುವ ದನಿಯಲ್ಲಿ ಹಾಡುವನು
ಮುಂದೆ ಕುಣಿದೋಡದಿರು ಓ ಮುದ್ದು ಜೇನು.
ಪ್ರವಾಸಗಳ ಕೊನೆಗೆ ಪ್ರೇಮಿಗಳ ಮಿಲನ,
ಎಲ್ಲ ಜಾಣನ ಮಗಗೆ ಗೊತ್ತಿದರ ಹದನ.

ಸರ್ ಆಂಡ್ರ್ಯೂ : ನಿಜವಾಗಿಯೂ ಚೆನ್ನಾಗಿದೆ.

ಸರ್ ಟೋಬಿ : ಭೇಷ್, ಭೇಷ್.

ನಕಲಿ : (ಹಾಡುತ್ತಾನೆ) ಪ್ರೇಮವಾವುದು ? ಅದು ಪರಲೋಕದ್ದಲ್ಲ
ಇಲ್ಲಿನ ಸಂತಸಕಿಲ್ಲಿಯೆ ಜೇನು ;
ಮುಂದೆ ಬರುವುದೇನೊ ನಮಗೂ ತಿಳಿದಿಲ್ಲ
ತಡಮಾಡಲು ಬೆಳ ಹೆಚ್ಚುವುದೇನು ?
ಮುದ್ದಿಸು ಬಾ, ಇಪ್ಪತ್ತರ ಚೆಲುವೆ.
ಯೌವನವೆಂಬುದು ಸಾಗರ ಬಲವೇ ?

ಸರ್ ಆಂಡ್ರ್ಯೂ : ತುಂಬ ಇಂಪಾದ ಕಂಠ, ನಾನು ನಿಜವಾದ ನೈಟ್ ಆಗಿರೋ ಹಾಗೆ.

ಸರ್ ಟೋಬಿ : ಉಸಿರು ಗಬ್ಬುನಾತ.

ಸರ್ ಆಂಡ್ರ್ಯೂ : ನಿಜವಾಗಿಯೂ ತುಂಬ ಇಂಪು, ಅಲ್ಲದೆ ಗಬ್ಬುನಾತ.

ಸರ್ ಟೋಬಿ : ನಮ್ಮ ಮೂಗಿನಲ್ಲಿ ಕೇಳೋ ಹಾಗಿದ್ದಿದ್ರೆ ಅದು ಗಬ್ಬುನಾತದ ಮಧ್ಯೇನೇ ಇಂಪಾಗಿರ್ತಿತ್ತು, ಆದರೆ ಈಗ ನಾವು ಆಕಾಶನೃತ್ಯ ಮಾಡೋಣವೇನು ? ಬೊಗಳು ರಾಗ ಹಾಡಿ ಗೂಬೆಯನ್ನ ಎಬ್ಬಿಸೋಣವೇ ? ಅದರಿಂದ ಪಟ್ಟೇಕಾರನ ಜೀವ ಮೂರು ಎಳೆಯಾಗಿ ಹೊರಬರತ್ತೆ. ಹಾಗೆ ಮಾಡೋಣವಾ ?

ಸರ್ ಆಂಡ್ರ್ಯೂ : ನನ್ನ ಮೇಲೆ ಸ್ನೇಹವಿರೋದಾದ್ರೆ, ಹೀಗೆ ಮಾಡೋಕೆ ಒಪ್ಪಿಕೋ. ಬೊಗಳು ರಾಗ ಹಾಡೋದರಲ್ಲಿ ನಾನೊಬ್ಬ ಪರಿಣತ.

ನಕಲಿ : ದೇವರಾಣೆ, ಬೊಗಳು ರಾಗ ಕೆಲವರಿಗೆ ತುಂಬ ಹಿಡಿಸುತ್ತೆ.

ಸರ್ ಆಂಡ್ರ್ಯೂ : ಸರಿ ಸರಿ. ನಾವು "ಎಲವೊ ಪೋಲಿ ಪಟಾಲಂ" ಹಾಡನ್ನ ಹಾಡೋಣ.

ನಕಲಿ : "ಬಾಯಿಮುಚ್ಚಿರೋ ಪೋಲಿ ಪಟಾಲಂ" ಅನ್ನೋದ ನೈಟ್ ?

ಅದರಲ್ಲಿ ನಿಮ್ಮನ್ನ ಪೋಲಿ ಅಂತ ಕರೀಬೇಕಾಗುತ್ತಲ್ಲ, ನೈಟ್ ?

ಸರ್ ಆಂಡ್ರ್ಯೂ: ಅಲ್ಲ ಹೌದಲ್ಲ, ಬಾ, ಶುರು ಮಾಡು. (ಅವರು ಹಾಡುತ್ತಾರೆ) (ಮರೀಯ ಹೆಂಡದೊಡನೆ ಬರುತ್ತಾಳೆ)

ಮರೀಯ: ಇದೇನು ಬೆಕ್ಕು ಕಚ್ಚಾಡ್ತೋ ಹಾಗೆ ಗಲಾಟೆ ಮಾಡ್ತಿದ್ದೀರಿ ? ಒಡತಿ ಅವರು ಪಾರುಪತ್ತೇದಾರರನ್ನು ಕರೆದು ನಿಮ್ಮನ್ನು ಹೊರಗೆ ಓಡಿಸೋಕೆ ಹೇಳದೆ ಇದ್ರೆ ಕೇಳಿ.

ಸರ್ ಟೋಬಿ: ಈ 'ಒಡತಿ' ಅನ್ನೋದು ಮೋಸ, ನಾವು ಚುರುಕು ಬುದ್ಧಿಯೋರು. ಮಾಲ್ವೋಲಿಯೋ ಬೆದರುಬೊಂಬೆ.

(ಹಾಡುತ್ತಾನೆ)

"ನಾವು ಮೂವರೂ ಖುಷಿಯ ಜನ"

ನಾನು ಸಗೋತ್ರ ಸಂಬಂಧಿ ಅಲ್ಲವಾ ? ನನಗೂ ಅವರಿಗೂ ರಕ್ತಸಂಬಂಧ ಇಲ್ಲವಾ ? ಒಡತೀ ಅಂತೆ ಒಡತಿ ! (ಹಾಡುತ್ತಾನೆ)

"ಬೇಬಿಲೋನಿನಲ್ಲೊಬ್ಬ ಬೇಲಿಬೋನು,
ಒಡತೀ, ಓ ಒಡತಿ !"

ನಕಲಿ: ನೀನು ನನ್ನ ಏನುಬೇಕಾದ್ರೂ ಅನ್ನು. ನೈಟ್ ಒಳ್ಳೆ ಜೋಕುಮಾರನ ಹಾಗೆ ತಮಾಷೆ ಮಾಡ್ತಿದ್ದಾನೆ.

ಸರ್ ಆಂಡ್ರ್ಯೂ: ಹೌದು, ಅವಕಾಶ ಕೊಟ್ಟರೆ ಚೆನ್ನಾಗಿ ಮಾತಾಡ್ತಾನೆ ಅವನು, ನಾನೂ ಹಾಗೇನೇ. ಅವನು ಮಾಡೋದ್ರಲ್ಲಿ ಸ್ವಲ್ಪ ಬಿನ್ನಾಣ ಜಾಸ್ತಿ, ನಂದು ತುಂಬ ಸಹಜವಾಗಿರತ್ತೆ.

ಸರ್ ಟೋಬಿ: (ಹಾಡುತ್ತಾನೆ) "ಡಿಸೆಂಬರಿನ ಹನ್ನೆರಡನೆ ದಿವಸ."

ಮರೀಯ: ನಿಮ್ಮ ದಮ್ಮಯ್ಯ, ಸುಮ್ಮನಾಗಿ.

(ಮಾಲ್ವೋಲಿಯೋ ಬರುತ್ತಾನೆ)

ಮಾಲ್ವೋಲಿಯೋ: ಅಯ್ಯಾ ಸ್ವಾಮಿಗಳೇ, ನಿಮಗೇನು ಹುಚ್ಚು ಹಿಡಿದಿದೆಯೋ ಅಥವಾ ಇನ್ನೇನಾದ್ರೂ ಬಂದಿದೆಯೋ ? ಕಲಾಯಿ ಮಾಡೋರ ಹಾಗೆ ಪಟಪಟ ಮಾತಾಡ್ತಿದ್ದೀರಲ್ಲ ! ನಿಮಗೇನು ಸರಿಯಾದ ಮಾತು, ನಡತೆ ಏನೂ ಗೊತ್ತಿಲ್ವ ? ಹೀಗೆ ಚಮ್ಮಾರರ ಹಾಗೆ ಹಾಡು ಕಿರಲ್ತಾ ನಮ್ಮ ಒಡತೀರ ಮನೇನೇನು ಸಾರಾಯಿ ಅಂಗಡಿ ಮಾಡ್ತೀರಾ ? ಈ

ಮನೆ ಯಾವುದು, ಇಲ್ಲಿರೋರು ಯಾರೋರು, ಈಗ ಯಾವ ಸಮಯ ಅನೋ ಪರಿಜ್ಞಾನವೇ ಇಲ್ವೆ ನಿಮಗೆ?

ಸರ್ ಟೋಬಿ: ಯಾಕೆ ನಮ್ಮ ಹಾಡು ಸಮಯಕ್ಕೆ ತಕ್ಕಹಾಗಿದೆಯಲ್ಲ, ಹಾಳಾದೋನೆ!

ಮಾಲ್ವೋಲಿಯೊ: ಸರ್ ಟೋಬಿ, ನಿಮ್ಮ ಬಗ್ಗೆ ನಾನು ನಿರ್ದಾಕ್ಷಿಣ್ಯವಾಗಿರಬೇಕಾಗತ್ತೆ. ನಮ್ಮ ಒಡತಿ ನಿಮಗೆ ಹೇಳೋದಕ್ಕೆ ತಿಳಿಸಿದಾರೆ : ನೀವು ಅವರಿಗೆ ಸಂಬಂಧೀಕರಾಗಿದ್ರೂ ನಿಮ್ಮ ಅಕ್ರಮಗಳು ಅವರಿಗೆ ಸರಿಹೋಗೋದಿಲ್ಲಾಂತ. ನೀವು ಈ ಅಪನಡತೇನ ಬಿಟ್ಟದ್ರೆ ಧಾರಾಳವಾಗಿ ಇಲ್ಲಿರಿ, ಇಲ್ಲಿದ್ರೆ ನೀವು ದಯಮಾಡಿಸೋದಾದರೆ ಅವರಿಗೆ ತುಂಬ ಸಂತೋಷವಂತೆ.

ಸರ್ ಟೋಬಿ: (ಮರೀಯಳನ್ನು ಕುರಿತು ಹಾಡುತ್ತಾನೆ)
"ಹೋಗಿ ಬರುವೆನು ಪ್ರಿಯೆಯೆ, ನಾ ಹೋಗಲೇಬೇಕು!"
(ಅವಳನ್ನು ಅಪ್ಪುತ್ತಾನೆ)

ಮರೀಯ: ಉಹ್ಞೂ, ಬೇಡ ಸರ್ ಟೋಬಿ.

ನಕಲಿ: (ಹಾಡುತ್ತಾನೆ) "ಅವನ ಕಾಲ ಮುಗಿಯಿತೆಂದು
ಕಣ್ಣುಗಳೇ ತೋರಿಸಿವೆ."

ಮಾಲ್ವೋಲಿಯೊ: ಓಹೋ, ಇದು ಹೀಗೂ ಇದೆಯೋ!

ಸರ್ ಟೋಬಿ: (ಹಾಡುತ್ತಾನೆ) "ನಾಎಂದೂ ಸಾಯುವುದಿಲ್ಲ." (ನೆಲದ ಮೇಲೆ ಬೀಳುವನು)

ನಕಲಿ: (ಹಾಡುತ್ತಾನೆ) ಸರ್ ಟೋಬಿ, ನೀನಾಗಲೆ ಬಿದ್ದಿವೆಯಲ್ಲ.

ಮಾಲ್ವೋಲಿಯೊ: ಇಷ್ಟರ ಮಟ್ಟಿಗೆ ನಿನ್ನ ಭೇಷ್ ಅನ್ನಬೇಕು.

ಸರ್ ಟೋಬಿ: (ಏಳುತ್ತ ಹಾಡುತ್ತಾನೆ) "ನಾನವನ ಜುಟ್ಟಿಡಿದು ಹೊರಗೆಳೆಯಲೇನು?"

ನಕಲಿ: (ಹಾಡುತ್ತಾನೆ) "ತೊಲಗಿಸೋ, ಇನ್ನೇನು, ಅವ ಗೆಳೆಯನೇನು ?"

ಸರ್ ಟೋಬಿ: (ಹಾಡುತ್ತಾನೆ) "ನಾ ತೊಲಗ ಹೇಳಲೇ ದಾಕ್ಷಿಣ್ಯವಿರದೇ?"

ನಕಲಿ: (ಹಾಡುತ್ತಾನೆ) ''ಇಲ್ಲಿಲ್ಲ, ನಿನಗಷ್ಟು ಗುಂಡಿಗೆಯು ಇಹುದೇ ?''

ಸರ್ ಟೋಬಿ: (ನಕಲಿಗೆ) ''ತಾಳ ತಪ್ಪಿದಿರಲ್ಲ; ಸುಳ್ಳು ಹೇಳುವಿರಿ.'' (ಮಾಲ್ವೋಲಿಯೋಗೆ) ಪಾರುಪತ್ತೇದಾರರಿಗಿಂತ ದೊಡ್ಡೋರು ಯಾರಿದಾರೆ ? ನಿಮಗೆ ಹೆಂಡ ಸೇರೋಲ್ಲ ಅಂದ್ರೆ ಭೂಮೀಲಿ ಈಚಲು ಮರವೇ ಬೆಳೆಯೋದಿಲ್ಲ ಅಂತ ಅಂದ್ಕೊಂಡಿದ್ದೀರಾ ?

ನಕಲಿ: ದೇವರಾಣೆ, ಶುದ್ಧಶುಂಠಿ ಬಾಯಲ್ಲಿಯೂ ಖಾರವಾಗಿರತ್ತೆ.

(ಹೋಗುತ್ತಾನೆ)

ಸರ್ ಟೋಬಿ: ನೀನು ಹೇಳೋದು ನಿಜ. ನಿಮ್ಮ ಪಾರುಪತ್ತೇದಾರಿಕೆ ಸರ ಇದೆಯಲ್ಲ, ಅದಕ್ಕೆ ಸ್ವಲ್ಪ ಗಿಲೀಟುಮಾಡಿಸಿ. ಮರೀಯ ಒಂದು ಬಟ್ಟಲು ಸಾರಾಯಿ. (ಅವಳು ಬಟ್ಟಲುಗಳನ್ನು ತುಂಬುತ್ತಾಳೆ).

ಮಾಲ್ವೋಲಿಯೊ: ಅಮ್ಮ, ಮೇರಿ. ಒಡತೀರು ನಿಮ್ಮ ಮೇಲಿಟ್ಟಿರೋ ವಿಶ್ವಾಸಕ್ಕೆ ನೀವು ತಿರಸ್ಕಾರಕ್ಕಿಂತ ಹೆಚ್ಚು ಬೆಲೆ ಕೊಡೋದಾದ್ರೆ, ಈ ಅನಾಗರೀಕ ನಡತೇಗೆ ನೀವು ಕುಮ್ಮಕ್ಕು ಕೊಡಬಾರ್ದು. ಈ ವಿಷಯವನ್ನ ಅವರಿಗೆ ನಾನೇ ಹೇಳ್ಬೇಕಾಗುತ್ತೆ. (ಹೋಗುತ್ತಾನೆ)

ಮರೀಯ: ಹೋಗು, ಅವರ ಮುಂದೆ ನಿನ್ನ ಕಿವಿ ಅಲ್ಲಾಡಿಸು.

ಸರ್ ಆಂಡ್ರ್ಯೂ: ಅವನ ಜೊತೆ ಕಾಲು ಕೆರೆಕೊಂಡು ಸವಾಲು ಹಾಕಿ, ಹೋರಾಟಕ್ಕೆ ಹೋಗ್ದೇನೇ ಅವನನ್ನ ಪೆಚ್ಚು ಮಾಡೋದು, ಹಸಿದಾಗ ಕುಡಿದಷ್ಟೇ ಮಜವಾದ ಕೆಲಸ.

ಸರ್ ಟೋಬಿ: ಹಾಗೇ ಮಾಡು, ನೈಟ್. ನಾನು ನಿನ್ನ ಪರವಾಗಿ ಒಂದು ಸವಾಲಿನ ಕಾಗದ ಬರೀತೀನಿ, ಅಥವಾ ನಿನ್ನ ಕೋಪದ ವಿಷಯಾನ ಅವನಿಗೆ ಮುಖತಃ ಬೇಕಾದ್ರೂ ಹೇಳ್ತೀನಿ.

ಮರೀಯ: ಸರ್ ಟೋಬಿ, ಈ ರಾತ್ರಿ ಸ್ವಲ್ಪ ಶಾಂತವಾಗಿರಿ. ಏಕೆಂದರೆ, ಕೌಂಟ್‌ನ ಯುವಕ ಓಲೆಕಾರ ಇವತ್ತು ನಮ್ಮ ಒಡತೀ ಹತ್ತಿರ ಬಂದಿದ್ದ, ಆಗ್ಲಿಂದ ಅವರು ಸ್ವಲ್ಪ ಶಾಂತಿ ಕಳಕೊಂಡಿದಾರೆ. ಇನ್ನು ಮಾಲ್ವೋಲಿಯೋ ವಿಚಾರ, ನಾನವನನ್ನ ನೋಡಿಕೋತೀನಿ. ಅವನು ಗಾದೆ ಮಾತಾಗೋ ಹಾಗೆ, ಎಲ್ಲರ್ಗಿಗೂ ತಮಾಷೆ ವಸ್ತು ಆಗೋ ಹಾಗೆ ಮಾಡದಿದ್ರೆ ನನ್ನನ್ನು ಹೆಸರು ಹಿಡಿದು ಕರೀಬೇಡಿ. ಇದನ್ನು ಹೇಗೆ

ಮಾಡೋದು ಅನ್ನೋದು ನಂಗೆ ಗೊತ್ತು.

ಸರ್ ಟೋಬಿ : ನಮಗೆ ಹೇಳು, ಅವನ ವಿಷಯ ನಮಗೂ ಸ್ವಲ್ಪ ತಿಳಿಸು.

ಮರೀಯ: ಅಯ್ಯೋ ದೇವರೆ, ಕೆಲವು ಸಲ ಅವನೊಬ್ಬ ತೀರ ಮಡಿವಂತ.

ಸರ್ ಆಂಡ್ರ್ಯೂ : ಓ ನನಗೆ ಹಾಗಂತ ಗೊತ್ತಿದ್ದಿದ್ದರೆ, ಅವನನ್ನು ನಾಯೀನ ಹೊಡೆದಟ್ಟೋ ಹಾಗೆ ಹೊಡೆದಟ್ಟಿದ್ದೆ.

ಸರ್ ಟೋಬಿ : ಯಾಕೆ ಅವನು ಮಡಿವಂತ ಅನ್ನೋದಕ್ಕೇನು ? ನಿನ್ನ ಸರಿಯಾದ ಕಾರಣ ಏನಪ್ಪ, ನೈಟ್ ಮಹಾನುಭಾವ ?

ಸರ್ ಆಂಡ್ರ್ಯೂ : ನನಗೆ ಸರಿಯಾದ ಕಾರಣವೇನೂ ಇಲ್ಲದಿದ್ರೂ ಸಾಕಷ್ಟು ಕಾರಣ ಇದೆ.

ಮರೀಯ: ಅವನು ಮಡಿವಂತನಾದ್ರೂ ಆಗಲಿ, ಊಸರವಳ್ಳಿ ಹಾಗೆ ಬಣ್ಣ ಬದಲಿಸೋನಾದ್ರೂ ಆಗಲಿ, ಸೋಗು ಹಾಕೋ ಕತ್ತೇನಾದ್ರೂ ಆಗಲಿ, ಒಳ್ಳೆ ನಡತೇನ ಉರು ಹೊಡೆದು ಜೋರಾಗಿ ಹೇಳಿಕೋತಾನೆ, ಅಷ್ಟೆ . ತಾನೊಬ್ಬ ದೊಡ್ಡ ಮನುಷ್ಯಾಂತ ಅಂದ್ಕೊಂಡಿದ್ದಾನೆ. ಪ್ರಪಂಚದ ಶ್ರೇಷ್ಠಗುಣವೆಲ್ಲ ತನ್ನಲ್ಲೇ ಇದೆ ಅಂತ ಭಾವಿಸ್ಕೊಂಡಿದಾನೆ. ತನ್ನನ್ನು ನೋಡೋರೆಲ್ಲ ತನ್ನನ್ನು ಪ್ರೀತಿಸ್ತಾರೆ ಅಂತಾನೇ ಅವನ ನಂಬಿಕೆ. ಅವನ ಈ ಗುಣವೇ ನಾನು ಅವನಿಗೆ ಚಳ್ಳೇ ಹಣ್ಣು ತಿನ್ನಿಸೋದಕ್ಕೆ ಸಹಾಯಕ್ಕೆ ಬರುತ್ತೆ.

ಸರ್ ಟೋಬಿ : ನೀನೇನು ಮಾಡ್ತೀಯ, ಹೇಳು.

ಮರೀಯ: ಅವನು ಬರೋ ದಾರೀಲಿ ಕೆಲವು ಗುಂಭವಾಗಿರೋ ಪ್ರೇಮಪತ್ರಗಳನ್ನ ಎಸೀತೀನಿ. ಅದರಲ್ಲಿ ವರ್ಣಿತವಾಗಿರೋ ಅವನ ಗಡ್ಡದ ಬಣ್ಣ, ಕಾಲಿನ ಆಕಾರ, ನಡೆಯೋ ರೀತಿ, ಕಣ್ಣಿನ ನೋಟ, ಹಣೆ, ಮೈಬಣ್ಣ – ಇವನ್ನೆಲ್ಲ ಓದಿ ಆ ವ್ಯಕ್ತಿ ತಾನೇ ಅಂತ ಅವನು ಅಂದ್ಕೋಬೇಕು. ನಿಮ್ಮ ಸೋದರ ಸೊಸೆ, ನಮ್ಮ ಒಡತೀರ ಹಾಗೇನೇ ನಾನು ಬರೀಬಲ್ಲೆ. ಕೆಲವು ಮರೆತುಹೋಗಿರೋ ವಿಷಯಗಳಿಗೆ ಸಂಬಂಧಿಸಿರೋ ಕಾಗದಗಳಲ್ಲಿ ಅಕ್ಷರ ನನ್ನದೋ ಅವರದೋ ಗುರುತಿಸೋಕ್ಕೆ ಕಷ್ಟವಾಗುತ್ತೆ.

ಸರ್ ಆಂಡ್ರ್ಯೂ : ಘನವಾದ ಯೋಚನೆ ; ನಂಗೆ ಒಂದು ಉಪಾಯ ಹೊಳೀತಿದೆ.

ಸರ್ ಟೋಬಿ : ನನ್ನ ಬುದ್ಧೀಗೂ ಒಂದು ಹೊಳೀತಿದೆ.

ಸರ್ ಆಂಡ್ರ್ಯೂ : ನೀನು ಹಾಕೋ ಕಾಗದಗಳನ್ನ ಓದಿ, ನನ್ನ ಸೊಸೇನೇ ಅದನ್ನು ಬರ್ದಿದ್ದಾಳೆ, ಅವಳು ತನ್ನನ್ನ ಪ್ರೀತಿಸ್ತಾಳೆ ಅಂತ ಅವನು ಅಂದ್ಕೋಬೇಕು.

ಮರೀಯ : ನನ್ನ ಉಪಾಯಗುದುರೇನೂ ಅದೇ ಬಣ್ಣದ್ದೇ.

ಸರ್ ಆಂಡ್ರ್ಯೂ : ನಿನ್ನ ಕುದುರೆ ಅವನನ್ನ ಕತ್ತೆಯಾಗಿ ಮಾಡುತ್ತೆ.

ಮರೀಯ : ಕತ್ತೆ ; ಅದರಲ್ಲಿ ಸಂದೇಹವೇ ಇಲ್ಲ.

ಸರ್ ಆಂಡ್ರ್ಯೂ : ಓ ಅದೊಳ್ಳೆ ಮಜವಾಗಿರತ್ತೆ

ಮರೀಯ : ಒಳ್ಳೆ ರಾಜ ತಮಾಷೆ ಆಗತ್ತೆ, ಖಂಡಿತ ನನ್ನ ಔಷಧಿ ಅವನ ಮೈಗೆ ಹತ್ತುತ್ತೆ ಅಂತ ನಂಗೆ ಗೊತ್ತು, ನಿಮ್ಮಿಬ್ಬರನ್ನೂ ಒಂದು ಕಡೆ ನಿಲ್ಲಿಸ್ತೀನಿ, ನಕಲೀನೂ ಅಲ್ಲಿರ್ತಾನೆ. ಅಲ್ಲಿ ಅವನು ಕಾಗದ ನೋಡ್ತಾನೆ. ಅದನ್ನು ಓದಿದಾಗ ಅದಕ್ಕೆ ಹೇಗೆ ವ್ಯಾಖ್ಯಾನ ಮಾಡ್ತಾನೆ ಅನ್ನೋದನ್ನ ನೋಡಿ. ಇವತ್ತು ರಾತ್ರಿ ಮಲಗಿಕೊಳ್ಳಿ. ಈ ವಿಷಯ ಹೇಗಿರತ್ತೆ ಅಂತ ಕನಸು ಕಾಣಿ. ನಾ ಹೊರಡ್ತೀನಿ. (ಒಳಗೆ ಹೋಗುತ್ತಾ)

ಸರ್ ಟೋಬಿ : ಶುಭರಾತ್ರಿ, ಪಾಂಥೀಸಿಲಿಯ ರಾಣಿಯವರಿಗೆ.

ಸರ್ ಆಂಡ್ರ್ಯೂ : ಒಳ್ಳೆ ಗಟ್ಟಿಗಿತ್ತಿ ಹೆಣ್ಣು.

ಸರ್ ಟೋಬಿ : ಒಳ್ಳೆ ಪುಟ್ಟ ಜಾತಿ ಬೇಟೆನಾಯಿ. ನನ್ನನ್ನವಳು ಪೂಜಿಸ್ತಾಳೆ. ಅದರಿಂದೇನಾದ್ದಾಗಾಯ್ತು (ನಿಟ್ಟುಸಿರು ಬಿಡುತ್ತಾನೆ)

ಸರ್ ಆಂಡ್ರ್ಯೂ : ಒಮ್ಮೆ ನನ್ನನ್ನೂ ಅವಳು ಪೂಜಿಸ್ತಿದ್ದಳು. (ನಿಟ್ಟುಸಿರು ಬಿಡುತ್ತಾನೆ)

ಸರ್ ಟೋಬಿ : ಇನ್ನು ಮಲಗಿಕೊಳ್ಳೋಣ, ನೈಟ್. ಹೆಚ್ಚು ದುಡ್ಡಿಗೆ ಹೇಳಿ ಕಳಿಸಬೇಕಾಗುತ್ತಪ್ಪ ನೀನು.

ಸರ್ ಆಂಡ್ರ್ಯೂ : ನನಗೆ ನಿನ್ನ ಸೋದರ ಸೊಸೆ ಸಿಕ್ಕದೆ ಹೋದ್ರೆ ನಾನು ಸಾಲದಲ್ಲಿ ಮುಳುಗಬೇಕಾಗತ್ತೆ.

ಸರ್ ಟೋಬಿ: ದುಡ್ಡಿಗೆ ಹೇಳಿಕಳಿಸು ನೈಟ್. ಅವಳು ನಿಂಗೆ ಸಿಗದಿದ್ದರೆ ನನ್ನ ಮೊಂಡು ಬಾಲದ ಕುದುರೆ ಅಂತ ಕರಿ.

ಸರ್ ಆಂಡ್ರ್ಯೂ: ನಾನು ತರಿಸದಿದ್ದರೆ, ನೀನು ನನ್ನನ್ನ ನಂಬಲೇಬೇಡ. ನಿನಗೆ ಬೇಕಾದ ಹಾಗೆ ಮಾಡ್ಕೋ.

ಸರ್ ಟೋಬಿ: ಬಾ, ಬಾ, ಸ್ವಲ್ಪ ಶೆರ್ರೀನ ಬಿಸಿ ಮಾಡ್ತೀನಿ; ಮಲಗಿಕೊಳ್ಳೋಕೆ ತೀರ ಹೊತ್ತಾಗಿಬಿಟ್ಟಿದೆ ಈಗ. ಬಾ ನೈಟ್. (ಹೋಗುತ್ತಾರೆ)

## ದೃಶ್ಯ ನಾಲ್ಕು

ಡ್ಯೂಕ್‌ನ ಅರಮನೆಯಲ್ಲಿ ಒಂದು ಕೋಣೆ
(ಆರ್ಸಿನೋ, ವಯೋಲ, ಕ್ಯೂರಿಯೋ ಮತ್ತಿತರರ ಪ್ರವೇಶ)

ಡ್ಯೂಕ್: (ವಯೋಲಳಿಗೆ) ಸ್ವಲ್ಪ ಸಂಗೀತ ಕೇಳಿಸು ಈಗ.
(ಸಂಗೀತಗಾರರು ಬರುತ್ತಾರೆ) ಶುಭದಿನ, ಸ್ನೇಹಿತರೆ.
ಸಿಸೇರಿಯೋ, ಆ ಹಾಡು, ನಿನ್ನೆ ರಾತ್ರಿ
ನಾವು ಕೇಳಿದ ಹಳೆಯ ವಿಚಿತ್ರ ಹಾಡನ್ನೇ ಹೇಳಿಸು.
ಹಗುರ ರಾಗದ, ತೀವ್ರಗತಿ ಚಪಲ ಛಂದಗಳ
ಕಷ್ಟಪಟ್ಟು ಕಟ್ಟಿದ ಹಾಡುಗಳಿಗಿಂತ ನನ್ನ
ಸಂಕಟದ ಭಾರವನ್ನದು ಕಡಿಮೆ ಮಾಡಿತು ತುಂಬ.
ಬಾ, ಒಂದೇ ಒಂದು ನುಡಿ ಸಾಕು.

ಕ್ಯೂರಿಯೋ: ಮಹಾಸ್ವಾಮಿಗಳು ಚಿತ್ತೈಸಬೇಕು. ಅದನ್ನು ಹಾಡುವವನು ಇಲ್ಲಿಲ್ಲ.

ಡ್ಯೂಕ್: ಯಾರು ಅವನು?

ಕ್ಯೂರಿಯೋ: ಫೇಸ್ಟ್ ಎಂಬ ನಕಲಿ ಸ್ವಾಮಿ. ಒಲಿವಿಯ ದೇವಿಯವರ ತಂದೆಗೆ ಅವನನ್ನು ಕಂಡರೆ ತುಂಬ ಇಷ್ಟ. ಅವನು ಇಲ್ಲೇ ಮನೇ ಹತ್ತಿರವೇ ಎಲ್ಲೋ ಇದಾನೆ.

ಡ್ಯೂಕ್: ಹುಡುಕಿರಿ ಅವನನ್ನ, ಅಲ್ಲಿಯವರೆಗೆ ನುಡಿಸಿ ಆ ರಾಗವನ್ನ
(ಕ್ಯೂರಿಯೋ ಹೋಗುತ್ತಾನೆ ; ಸಂಗೀತ)

ಇಲ್ಲಿ ಬಾ ಹುಡುಗ, ನೀನೆಂದಾದರೂ ಪ್ರೇಮಿಸಿದರೆ
ಅದರ ಮಧುರಯಾತನೆಯ ಮಧ್ಯೆ ನೆನೆಸಿಕೋ ನನ್ನ:
ಏಕೆಂದರೆ, ನನ್ನಂತೇ ನಿಜವಾದ ಪ್ರೇಮಿಗಳೆಲ್ಲ
ಅವರು ಪ್ರೇಮಿಸಿದ ವ್ಯಕ್ತಿಯ ಸ್ಥಿರ ಚಿತ್ರವನ್ನುಳಿದು
ಮಿಕ್ಕೆಲ್ಲ ನಡತೆಗಳಲ್ಲಿ ಅಸ್ಥಿರರು, ಚಂಚಲರು,
ಈ ರಾಗದ ಬಗ್ಗೆ ಏನನ್ನಿಸುತ್ತದೆ ನಿನಗೆ?

ವಯೋಲ: ಒಲವು ನೆಲೆಸಿರುವ ಹೃದಯ ಸಿಂಹಾಸನದಲ್ಲಿ
ಅದು ಪ್ರತಿಧ್ವನಿಸುತ್ತದೆ – ಆಳವಾಗಿ.

ಡ್ಯೂಕ್: ನಿಪುಣತೆಯಿಂದ ಮಾತಾಡುತ್ತೀಯೆ ನೀನು.
ನನ್ನಾಣೆ, ನೀನಿನ್ನೂ ಎಳೆಯವನಾಗಿದ್ದರೂ
ನಿನ್ನ ಕಣ್ಣುಗಳು ತಮ್ಮ ಪ್ರೀತಿಯ ಮುಖದತ್ತಲೇ
ನಟ್ಟಂತಿವೆ. ಅಲ್ಲವೇ ಹುಡುಗ?

ವಯೋಲ: ಸ್ವಲ್ಪ ಮಟ್ಟಿಗೆ, ತಮ್ಮ ಕೃಪೆಯಿಂದಾಗಿ.

ಡ್ಯೂಕ್: ಅವಳೆಂತಹ ಹೆಣ್ಣು?

ವಯೋಲ: ನೋಡಲು ನಿಮ್ಮಂತೆಯೇ?

ಡ್ಯೂಕ್: ಹಾಗಾದರೆ ನಿನಗವಳು ಯೋಗ್ಯಳಲ್ಲ. ವಯಸ್ಸೆಷ್ಟು?

ವಯೋಲ: ನಿಮ್ಮದೇ ವಯಸ್ಸು, ಸ್ವಾಮಿ.

ಡ್ಯೂಕ್: ಅಯ್ಯೋ ದೇವರೆ, ತುಂಬ ವಯಸ್ಸು. ಹೆಣ್ಣು ಎಂದೂ
ತನಗಿಂತ ಹಿರಿಯ ವಯಸ್ಸಿನವನನ್ನೇ ಆರಿಸಲಿ,
ಆಗವಳು ಹೊಂದಿಕೊಳ್ಳುತ್ತಾಳೆ, ಗಂಡನೆದೆಯಲ್ಲಿ
ಕುಣಿದು ಅದನ್ನು ಹದಗೊಳಿಸುತ್ತಾಳೆ.
ಏಕೆಂದರೆ, ಮಗು, ನಾವೆಷ್ಟೇ ಹೊಗಳಿಕೊಂಡರೂ
ನಮ್ಮ ಪ್ರೇಮಕಲ್ಪನೆಯೆಲ್ಲ ಹೆಂಗುಸರದಕ್ಕಿಂತ
ಹಗುರ, ಅಸ್ಥಿರ, ಹೆಚ್ಚು ಹಂಬಲಿಕೆ, ಡೋಲಾಯಮಾನ;
ಕಳೆದುಕೊಳ್ಳುವುದೂ ಬೇಗ, ಪಡೆಯುವುದೂ ಬೇಗ.

ವಯೋಲ: ಹೌದೆಂದೂ ನನಗೂ ಅನ್ನಿಸುತ್ತದೆ, ಸ್ವಾಮಿ.

ಡ್ಯೂಕ್ : ಹಾಗಾದರೆ ನಿನ್ನ ಪ್ರಿಯೆ ನಿನಗಿಂತ ಕಿರಿಯಳಾಗಿರಲಿ,
ಇಲ್ಲದಿದ್ದರೆ ನಿನ್ನ ವಿಶ್ವಾಸ ತಾಳ್ಮೆಗೆಡುತ್ತದೆ.
ಹೆಂಗಸರು ಚೆಂಗುಲಾಬಿಗಳಂತೆ, ಕೋಮಲ ಹೂ
ಒಮ್ಮೆ ಅರಳಿದರೆ ಸಾಕು, ಕ್ಷಣದಲ್ಲೇ ಬೀಳುತ್ತವೆ.

ವಯೋಲ: ನಿಜ, ಅವರ ರೀತಿಯೆ ಹಾಗೆ ಅಯ್ಯೋ, ಹಾಗೆಯೇ
ಪರಿಪೂರ್ಣಗೊಂಡ ಕ್ಷಣವೇ ಸಾವು!
(ಕ್ಯೂರಿಯೋ ನಕಲಿಯೊಡನೆ ಮರಳಿ ಬರುತ್ತಾನೆ)

ಡ್ಯೂಕ್ : ಓ ಅಯ್ಯಾ ಬಾ. ನಿನ್ನೆ ಕೇಳಿದ ಹಾಡು ನೀಡು.
ಗಮನಿಸು, ಸಿಸೇರಿಯೋ, ಅದು ಹಳೆಯದು, ಸರಳ.
ಬಿಸಿಲಲ್ಲಿ ನೂಲುವ ಕನ್ಯೆಯರೂ ಹಿರಿಯರೂ,
ಮೂಳೆಯುರುಳೆಗಳಲ್ಲಿ ನೇಯುವ ಹಗುರ ಮನದ ಹೆಂಗಸರೂ
ಅದನ್ನು ಹೇಳುವುದು ವಾಡಿಕೆ : ಅದು ಸರಳ ಸತ್ಯ,
ಪ್ರೇಮ ಮುಗ್ಧತೆಯೊಡನೆ ಪ್ರಾಚೀನ ಜಗತ್ತಿನಂತೆ
ಆಟವಾಡುತ್ತದೆ ಅದು.

ನಕಲಿ: ಹೇಳಬಹುದೇ, ಸ್ವಾಮಿ?

ಡ್ಯೂಕ್ : ಓಹೋ, ದಯವಿಟ್ಟು ಹಾಡು. (ಸಂಗೀತ)

ನಕಲಿ: (ಹಾಡುತ್ತಾನೆ)
ಬಂದು ಬಿಡು, ಬಂದು ಬಿಡು, ಓ ಮೃತ್ಯುದೈವ
ದುಃಖಿ ಶವಪೆಟ್ಟಿಗೆಯ ಒಳಗಿರುವೆನು;
ಹೊರಟುಬಿಡು, ಹೊರಟುಬಿಡು, ಓ ಪ್ರಾಣದೈವ
ಕ್ರೂರ ಸುಂದರಿಯಿಂದ ಕೊಲೆಯಾದೆನು:
ನನ್ನ ಬಿಳಿ ಶವವಸ್ತ್ರ ಯೂ ಮರದಿ ಹೊಡೆದಿಟ್ಟು
ಸಿದ್ಧಗೊಳಿಸು!
ಯಾರು ಬಂದವರೆನ್ನ ಮರಣಕ್ಕೆ ಭುಜಕೊಟ್ಟು?
ಬೆರಳುಮಡಿಸು.
ನನ್ನ ಕರಿಯ ಶವಪೆಟ್ಟಿಗೆಯ ಮೇಲೆರೆಯೆ
ಒಂದು ಹೂವಾದರೂ ಕೊಳ್ಳುವುದು ಬೇಡ:
ಮೂಳೆಯನ್ನೆಸೆವ ಕಡೆ, ನನಗೆ ಕಣ್ಣೀರ್ಗರೆಯೆ
ಬೇಡ, ಯಾವೊಬ್ಬ ಸ್ನೇಹಿತನು ಕೂಡ.

ಲಕ್ಷ ಸಾವಿರ ಬಿಸಿಯುಸಿರು ಉಳಿಸುವುದಕೆಂದು
ಕಾಣದೆಡೆ ಹುಗಿದುಬಿಡಿ ನನ್ನ ನೀವು
ಖಿನ್ನ ಹಾರ್ದಿಕ ಪ್ರೇಮಿ ನನ್ನ ಗೋರಿಯ ಕಂಡು
ಪಡದಿರಲಿ ನೋವು.

ಡ್ಯೂಕ್ : (ಹಣವನ್ನಿತ್ತು) ಇದು ನಿನ್ನ ತೊಂದರೆಗಾಗಿ.

ನಕಲಿ : ತೊಂದರೆಯೇನಿಲ್ಲ, ಸ್ವಾಮಿ. ಹಾಡುವುದೆಂದರೆ ನನಗೆ ಸಂತೋಷವೇ.

ಡ್ಯೂಕ್ : ಹಾಗಾದರೆ ನಿನ್ನ ಸಂತೋಷಕ್ಕೇ ಈ ಹಣ.

ನಕಲಿ : ನಿಜವಾಗಿ ಸ್ವಾಮಿ, ಸಂತೋಷಕ್ಕೆ ಒಂದಲ್ಲ ಒಂದು ಸಲ ಹಣ ಕೊಡಲೇಬೇಕು.

ಡ್ಯೂಕ್ : ಸರಿ. ನೀನಿನ್ನು ಹೊರಡಬಹುದು.

ನಕಲಿ : ದುಃಖದೇವತೆ ನಿನ್ನನ್ನು ಕಾಪಾಡಲಿ. ದರ್ಜಿ ನಿನ್ನ ಉಡುಪನ್ನು ಬಣ್ಣ ಬದಲಾಯಿಸೋ ರೇಷ್ಮೆಯಿಂದ ಹೊಲಿಯಲಿ, ಏಕೆಂದರೆ ನಿನ್ನ ಮನಸ್ಸು ಒಂದು ನೀಲಮಣಿ ಹಾಗೆ. ಇಂಥ ಅಸ್ಥಿರ ಮನಸ್ಸಿನೋರನ್ನ ಸಮುದ್ರಕ್ಕೆಸೆಯ ಬೇಕೂಂತ ನನಗನ್ನಿಸತ್ತೆ. ಅಲ್ಲಿ ಎಲ್ಲವೂ ಅವರ ಕೆಲಸವೇ, ಎಲ್ಲವೂ ಅವರ ಉದ್ದೇಶವೇ ಆಗತ್ತೆ. ಏಕೆಂದರೆ, ಏನೂ ಉದ್ದೇಶವಿಲ್ಲದ ಸಮುದ್ರಯಾನ ಹೀಗೆ ಚೆನ್ನಾಗಿ ಆಗೋದು. ಬರ್ತೀನಿ ನಮಸ್ಕಾರ. (ಹೋಗುತ್ತಾನೆ)

ಡ್ಯೂಕ್ : ಮಿಕ್ಕವರು ಅತ್ತ ಸರಿಯಿರಿ. (ಕ್ಯೂರಿಯೋ, ಸೇವಕರು ಹೋಗುತ್ತಾರೆ)
ಸಿಸೇರಿಯೋ, ಮತ್ತೊಮ್ಮೆ ಆ ಕ್ರೂರರಾಣಿಯೆಡೆ ಹೋಗು.
ಈ ಜಗತ್ತಿಗಿಂತಲೂ ಉದಾತ್ತವಾದ ನನ್ನ ಪ್ರೇಮ
ಕೊಳಕು ಮಣ್ಣಿಗೆ ಆಸೆಪಡಲಾರದೆಂದು ಹೇಳು.
ಆಕೆಯ ಮೇಲೆ ಅದೃಷ್ಟ ಅನುಗ್ರಹಿಸಿರುವುದನ್ನ
ನಾನು ಅದೃಷ್ಟದಂತೇ ತಿರಸ್ಕರಿಸುವೆನೆಂದು ತಿಳಿಸು.
ಆದರೆ ಪ್ರಕೃತಿ ಅಲಂಕರಿಸಿರುವ ಅವಳ ಪವಾಡಮಯ
ರತ್ನಗಳ ರಾಣಿಯಂತಹ ಚೆಲುವು ನನ್ನನಾಕರ್ಷಿಸಿದೆ.

ವಯೋಲ : ನಿಮ್ಮನ್ನಾಕೆ ಒಲಿಯದಿದ್ದರೆ, ಸ್ವಾಮಿ ?

ಡ್ಯೂಕ್ : ನನಗೆ ಆ ರೀತಿ ಉತ್ತರವೀಯಲು ಸಾಧ್ಯವಿಲ್ಲ.

ವಯೋಲ: ಆದರೆ ಅದನ್ನು ನೀವು ಒಪ್ಪಲೇಬೇಕು.
ನಿಮಗೆ ಒಲಿವಿಯಳ ಬಗ್ಗೆ ಹೇಗೋ ಹಾಗೆ
ನಿಮ್ಮ ಪ್ರೇಮಕ್ಕಾಗಿ ಹೃದಯಯಾತನೆ ಪಡುವ
ಹೆಣ್ಣೊಬ್ಬಳಿದ್ದರೆ, ಇರಲೂಬಹುದು, ನೀವು
ಅವಳನ್ನು ಪ್ರೇಮಿಸಲಾರಿರಿ. ಹಾಗೆಂದು ಹೇಳುತ್ತೀರಿ.
ಅವಳಿಗಾ ರೀತಿ ಹೇಳಬಾರದೇ, ಹಾಗಾದರೆ ?

ಡ್ಯೂಕ್ : ನನ್ನ ಹೃದಯವನ್ನ ಒಂಡುತ್ತಿರುವಂತಹ
ತೀವ್ರ ಪ್ರೇಮಭಾವನೆಯನ್ನ ಯಾವ ಹೆಂಗಸಿನ
ಪಕ್ಕೆಗಳೂ ಸಹಿಸಲಾರವು, ಯಾವ ಹೆಂಗಸಿನ ಹೃದಯವೂ
ಇಷ್ಟು ವಿಶಾಲವಾಗಿರಲಾರದು, ಇಷ್ಟನ್ನ ತಡೆಯಲಾರದು.
ಅದಕ್ಕೆ ಇಷ್ಟನ್ನ ಉಳಿಸಿಕೊಳ್ಳುವ ಶಕ್ತಿ ಇಲ್ಲ.
ಅಯ್ಯೋ ಅವರ ಪ್ರೇಮವನ್ನು ರುಚಿ ಎನ್ನಬಹುದು.
ಚಲಿಸುವುದು ಯಕೃತ್ತಲ್ಲ, ನಾಲಗೆ.
ಕಟ್ಟರೆಯಾಗಿ, ರುಚಿಯಾಗಿ, ಅದು ವಾಕರಿಸುತ್ತದೆ.
ಆದರೆ ನನ್ನದು ಸಮುದ್ರವನ್ನೇ ನುಂಗುವ ಹಸಿವು, ಅಷ್ಟನ್ನೂ
ಜೀರ್ಣಿಸಿಕೊಳ್ಳಬಲ್ಲದು. ಹೆಂಗಸೊಬ್ಬಳು
ನನ್ನ ಪ್ರೇಮಿಸುವ ರೀತಿಗೂ ನಾನು ಒಲಿವಿಯಳನ್ನು
ಪ್ರೇಮಿಸುವ ತೀವ್ರತೆಗೂ ಹೋಲಿಸಬೇಡ.

ವಯೋಲ: ಹೌದು, ಆದರೂ ನನಗೆ ಗೊತ್ತಿದೆ —

ಡ್ಯೂಕ್ : ಏನು ಗೊತ್ತಿದೆ ನಿನಗೆ ?

ವಯೋಲ: ಹೆಂಗಸರು ಗಂಡಸರನ್ನು ಒಲಿಯುವ ರೀತಿ ಚೆನ್ನಾಗಿ ಗೊತ್ತು.
ನಿಜವಾಗಿ ಅವರೂ ನಮ್ಮಂತೆ ಹೃತ್ಪೂರ್ವಕವಾಗಿರುತ್ತಾರೆ.
ನಮ್ಮ ತಂದೆಯ ಮಗಳು ಒಬ್ಬನನ್ನ ಪ್ರೇಮಿಸಿದಳು.
ನಾನು ಹೆಣ್ಣಾಗಿದ್ದರೆ, ಪ್ರಾಯಶಃ ತಮ್ಮನ್ನು ಪ್ರೀತಿಸಬಹುದಾದಷ್ಟು.

ಡ್ಯೂಕ್ : ಅವಳ ವಿಷಯವೇನು ?

ವಯೋಲ: ಶೂನ್ಯ, ಪ್ರಭು.

ತನ್ನ ಪ್ರೀತಿಯನ್ನವಳು ಯಾರಿಗೂ ತಿಳಿಸದೆಯೇ,
ಮೊಗ್ಗಿನಲ್ಲಿರುವ ಕೀಡೆಯಂತೆ ಅದು
ತನ್ನ ಕೋಮಲ ಕಪೋಲಗಳನ್ನ ಕೊರೆಯಲು ಬಿಟ್ಟಳು,
ಕೊರಗಿ ಕೃಶವಾದಳು.
ಹಸಿರು-ಹಳದಿ ದುಃಖದಲ್ಲಿ ಅಳಲತ್ತ ನಸುನಗುತ್ತ
ಸ್ಮಾರಕದ ಮೇಲಣ ಸಹನೆಯಂತೆ ಕೂತಳು.
ಇದು ನಿಜವಾದ ಪ್ರೇಮವಲ್ಲವೇ ?
ನಾವು ಗಂಡಸರು ಹೆಚ್ಚು ಮಾತಾಡುತ್ತೇವೆ, ಆಣೆಯಿಡುತ್ತೇವೆ.
ಆದರೆ ನಿಜವಾಗಿ ಅನಿಸಿಕೆಗಿಂತ ಆವುಟವೆ ಹೆಚ್ಚು,
ಏಕೆಂದರೆ ನಾವು ಆಣೆ ಮಾತುಗಳಲ್ಲಿ ಹೆಚ್ಚು,
ಪ್ರೇಮದಲ್ಲಿ ಕಡಿಮೆ ಎನಿಸಿಕೊಂಡಿದ್ದೇವೆ.

ಡ್ಯೂಕ್ : ನಿನ್ನ ತಂಗಿ ಪ್ರೇಮದಿಂದಾಗಿ ಸತ್ತಳೇ, ಹುಡುಗ ?

ವಯೋಲ : ನಮ್ಮ ತಂದೆಯ ಮನೆಯ ಸೋದರಿಯರಲ್ಲಿ
ಉಳಿದುದ್ದು ನಾನೊಬ್ಬನೇ ; ಸೋದರರಲ್ಲಿ ಕೂಡ.
ಇಷ್ಟಾದರೂ ನನಗೆ ತಿಳಿಯದು.... (ಅವರು ಯೋಚಿಸುತ್ತಾರೆ)
ಸ್ವಾಮಿ, ಆ ಒಡತಿಯರ ಬಳಿಗೆ ಹೊರಡಲೇ ?

ಡ್ಯೂಕ್ : (ಎದ್ದು ಹೊರಡುತ್ತ) ಹೌದು, ಅದೇ ವಿಷಯ.
ಬೇಗ ಹೊರಡು ; ಆಕೆಗೀ ಒಡವೆಯನ್ನ ಕೊಡು.
ನನ್ನ ಪ್ರೇಮವು ಎಂದೆಂದೂ ಪದಚ್ಯುತಗೊಳ್ಳಲಾರದು,
ತಿರಸ್ಕಾರವನ್ನು ತಡೆಯಲಾರದು ಎಂದು ಹೇಳು.

(ಹೋಗುತ್ತಾರೆ)

## ದೃಶ್ಯ ಐದು

ಒಲಿವಿಯಳ ಮನೆಗೆ ಸೇರಿದ ಗೋಡೆಯಿರುವ ಉದ್ಯಾನ ; ಅದಕ್ಕೆ ಎರಡು ಬಾಗಿಲು : ಒಂದು ತೋಟದಿಂದ ಹೊರಕ್ಕೆ ಹೋದರೆ, ಮತ್ತೊಂದು ಮನೆಯೊಳಕ್ಕೆ ಹೋಗುತ್ತದೆ. ದಾರಿಯ ಇಕ್ಕೆಲಗಳಲ್ಲಿ ಎತ್ತರವಾದ ಮರಗಳು, ಗೋಡೆಯ ಪಕ್ಕದಲ್ಲಿ ಒಂದು ಕಲ್ಲಿನ ಪೀಠ.

(ಮನೆಬಾಗಿಲು ತೆಗೆದಾಗ ಸರ್ ಟೋಬಿ ಬೆಲ್ಚ್ ಸರ್ ಆಂಡ್ರ್ಯೂ, ಆಗ ಚೀಕ್ ಜೊತೆಗೆ ಬರುತ್ತಾನೆ)

ಸರ್ ಟೋಬಿ : (ಹಿಂದಿರುಗಿ ಕೂಗುತ್ತ) ಹೀಗೆ ಬರಬೇಕು, ಮಹಾಸ್ವಾಮಿ ಫೇಬಿಯನ್

ಫೇಬಿಯನ್ : (ಬಾಗಿಲ ಮೂಲಕ ಅವನನ್ನು ಹಿಂಬಾಲಿಸುತ್ತ) ಇಗೋ ಬರ್ತಾ ಇದ್ದೀನಿ. ಈ ತಮಾಷೇಲಿ ಒಂದು ಕಾಳಿನಷ್ಟು ಕಳಕೊಂಡರೂ, ನಾನು ದುಃಖದಲ್ಲಿ ಬೆಂದು ಸಾಯೋ ಹಾಗಾಗಲಿ.

ಸರ್ ಟೋಬಿ : ಆ ಜಿಪುಣಾಗ್ರೇಸರ ಮೂರ್ಖ ಕಳ್ಳಕೊರಮನಿಗೆ ಏನಾದರೂ ತಕ್ಕ ಶಾಸ್ತಿಯಾದರೆ ನಿನಗೆ ಖುಷಿಯಾಗೋದಿಲ್ಲವಾ ?

ಫೇಬಿಯನ್ : ಖುಷಿಯೋ ಖುಷಿ, ಕಣಯ್ಯ. ಒಂದು ಸಲ ಕರಡಿ ಮೇಲೆ ಛೂ ಬಿಡೋ ಆಟದ ವಿಷಯದಲ್ಲಿ ಒಡತೀರ ಹತ್ತಿರ ಚಾಡಿ ಹೇಳಿ ಅವನು ನನ್ನ ಮೇಲಿಟ್ಟಿದ್ದ ವಿಶ್ವಾಸಾನ ಹಾಳು ಮಾಡಿದ, ಗೊತ್ತಿಲ್ಲ ನಿಂಗೆ.

ಸರ್ ಟೋಬಿ : ಅವನಿಗೆ ಕೋಪ ಬರಿಸೋಕೆ ನಮ್ಮ ಹತ್ತಿರ ಕರಡಿ ಇದೆ, ಅದರ ಮೈಮೇಲೆ ಬಾಸುಂಡೆಗಳು ಬರಬೇಕು – ಹಾಗೆ ಆಟ ಆಡಿಸೋಣ ಅಲ್ಲವೇ ಸರ್ ಆಂಡ್ರ್ಯೂ ?

ಸರ್ ಆಂಡ್ರ್ಯೂ : ಹಾಗೆ ಮಾಡದಿದ್ದರೆ, ನಾವು ಹಾಳಾದ ಹಾಗೆ.

(ಮರೀಯ ಆತುರವಾಗಿ ಬರುತ್ತಾಳೆ)

ಸರ್ ಟೋಬಿ : ಪುಟ್ಟಖೂಳಮ್ಮ ಬರ್ತಿದಾಳೆ. ಏನು ಸಮಾಚಾರ ಬಂಗಾರಿ ?

ಮರೀಯ : ನೀವು ಮೂರು ಜನಾನೂ ಮರದ ಹಿಂದೆ ಬಚ್ಚಿಟ್ಟುಕೊಳ್ಳಿ. ಈ ದಾರೀಲೇ ಮಾಲ್ವೋಲಿಯೋ ಬರ್ತಿದಾನೆ. ಈ ಅರ್ಧಗಂಟೆ ಹೊತ್ತು ಬಿಸಿಲಲ್ಲಿ ನಿಂತುಕೊಂಡು ತನ್ನ ನೆರಳ ಜೊತೇಲೇ ಒಳ್ಳೆ ನಡೆ ಅಭ್ಯಾಸ ಮಾಡ್ತಿದ್ದ. ಅವನ ವಕ್ರ ಆಟ ನೋಡ್ತಾ ಇರಿ. ಈ ಕಾಗದ ಅವನನ್ನ ಸದಾ ಯೋಚನೆ ಮಾಡೋ ಮೂರ್ಖನನ್ನಾಗಿ ಮಾಡುತ್ತೆ ನಂಗೆ ಗೊತ್ತು. ಹತ್ತಿರ ಬನ್ನಿ (ಮರದ ಹಿಂದೆ ಅವರು ಅಡಗಿಕೊಳ್ಳುತ್ತಾರೆ) ನೀನು ಇಲ್ಲಿ ಬಿದ್ದಿರು (ಎಂದು ಒಂದು ಕಾಗದವನ್ನೆಸೆಯುತ್ತಾಳೆ). ಇಗೋ ಮಿಕ ಬರ್ತಾ ಇದೆ. ಉಜ್ಜಿಸಿ ಬಲೇಲಿ ಹಾಕ್ಕೋಬೇಕು.

(ಒಳಕ್ಕೆ ಹೋಗುತ್ತಾಳೆ)

(ಮಾಲ್ವೋಲಿಯೋ ಚುಂಗಿನ ಹ್ಯಾಟು ಧರಿಸಿ, ಯೋಚನೆ ಮಾಡುತ್ತಾ ನಿಧಾನವಾಗಿ ಆ ದಾರಿಯಗುಂಟ ಬರುತ್ತಾನೆ).

ಮಾಲ್ವೋಲಿಯೊ : ಇದು ಅದೃಷ್ಟವಲ್ಲದೆ ಬೇರೇನೂ ಅಲ್ಲ, ಎಲ್ಲವೂ ಅದೃಷ್ಟವೇ. ಮರೀಯ ಒಂದ್ಸಲ ಹೇಳಿದ್ಲು ನನ್ನನ್ನವಳು ಪ್ರೀತಿಸ್ತೀನಿ ಅಂತ. ಅವಳೇನಾದರೂ ಪ್ರೀತಿಸೋದಾದರೆ ನನ್ನಂಥೋನನ್ನೇ ಅಂತ ಹೇಳಿ ಅವಳು ನನ್ನ ಹತ್ತಿರ ಬಂಪದ್ದನ್ನೂ ಕೇಳಿದೇನೆ. ಅವಳನ್ನ ಅನುಸರಿಸೋ ಮಿಕ್ಕೆಲ್ಲರಿಗಿಂತಲೂ ಅವಳು ನನಗೇ ಹೆಚ್ಚು ಗೌರವ ತೋರಿಸೋದು. ಇದನ್ನ ನಾನು ಏನಂತ ತಿಳೀಬೇಕು ?

ಸರ್ ಟೋಬಿ : (ಮೆಲ್ಲಗೆ) ಇವನೊಬ್ಬ ಜಂಬದ ಕೋಳಿ, ತಲೆಹೋಕ !

ಫೇಬಿಯನ್ : (ಮೆಲ್ಲಗೆ) ಷ್, ಸುಮ್ನಿರು ಯೋಚನೆ ಅನ್ನೋದು ಅವನನ್ನ ಅಪರೂಪದ ಟರ್ಕಿ ಹುಂಜದ ಹಾಗೆ ಮಾಡತ್ತೆ. ಸೆಟೆದ ತುರಾಯೀಲಿ ಅವನು ಹೇಗೆ ಜಿಂಕದಿಂದ ನಡೀತಿದ್ದಾನೆ !

ಸರ್ ಆಂಡ್ರ್ಯೂ : (ಮೆಲ್ಲಗೆ) ದೇವರ ದಯ. ಈ ತಲೆಹೋಕನನ್ನ ಹೀಗೆ ಮಟ್ಟಹಾಕೋ ಹಾಗಾಯ್ತಲ್ಲ.

ಫೇಬಿಯನ್ : (ಮೆಲ್ಲಗೆ) ಷ್, ಸುಮ್ನಿರು ಅಂತ ಹೇಳ್ಲಿಲ್ಲವಾ ?

ಮಾಲ್ವೋಲಿಯೊ : ಕೌಂಟ್ ಮಾಲ್ವೋಲಿಯೋ ಆಗೋದೊಂದ್ರೆ !

ಸರ್ ಟೋಬಿ : (ಮೆಲ್ಲಗೆ) ಎಲ, ಧೂರ್ತ !

ಸರ್ ಆಂಡ್ರ್ಯೂ : (ಮೆಲ್ಲಗೆ) ಗುಂಡಿಟ್ಟುಕೊಲ್ಲಬೇಕು ಅವನ್ನ

ಫೇಬಿಯನ್ : (ಮೆಲ್ಲಗೆ) ಸದ್ದು, ಸದ್ದು.

ಮಾಲ್ವೋಲಿಯೊ : ಅದಕ್ಕೊಂದು ನಿದರ್ಶನ ಇದೆ : ಸ್ಟ್ರಾಚಿ ಹೆಂಡತಿ ಉಡುಪಿನ ಆಳನ್ನ ಮದುವೆ ಆದಳು.

ಸರ್ ಆಂಡ್ರ್ಯೂ : (ಮೆಲ್ಲಗೆ) ಇವನಿಗೆ ಬೆಂಕಿ ಬೀಳ !

ಫೇಬಿಯನ್ : (ಮೆಲ್ಲಗೆ) ಸುಮ್ಮನಿರಬಾರದೇ ? ತುಂಬ ಯೋಚಿಸ್ತಿದಾನೆ. ಯೋಚನೆ ಅವನನ್ನ ಹೇಗೆ ಉಬ್ಬಿಸಿದೆ ನೋಡು.

ಮಾಲ್ವೋಲಿಯೊ : ಅವಳನ್ನ ಮದುವೆ ಆದ ಮೂರು ತಿಂಗಳ ಮೇಲೆ ನನ್ನ ಸಿಂಹಾಸನದ ಮೇಲೆ ಕೂತು —

ಸರ್ ಟೋಬಿ : (ಮೆಲ್ಲಗೆ) ಎಲಾ ಇವನ ! ಅವನ ಕಣ್ಣಿಗೆ ಹೊಡೆಯೋಕೆ ನನ್ನ ಹತ್ರ ಕವಣೆಕಲ್ಲು ಇಲ್ವಲ್ಲ!

ಮಾಲ್ವೋಲಿಯೊ : ಒಳ್ಳೆ ಮಕಮಲ್ಲಿನ ಗೌನು ಹಾಕ್ಕೊಂಡು, ನನ್ನ ಅಧಿಕಾರಿಗಳನ್ನೆಲ್ಲ ಹತ್ತಿರ ಕರೀತೇನೆ ; ನಾನು ಎದ್ದು ಬಂದಿರೋ ಹಾಸಿಗೆ ಮೇಲೆ ಒಲಿವಿಯ ಮಲಗೇ ಇರ್ತಾಳೆ.

ಸರ್ ಟೋಬಿ : (ಮೆಲ್ಲಗೆ) ನರಕದ ಬೆಂಕಿ–ಗಂಧಕ ಬೀಳ ಇವನ್ಮೇಲೆ!

ಫೇಬಿಯನ್ : (ಮೆಲ್ಲಗೆ) ಸುಮ್ಮನಿರಪ್ಪ ಸುಮ್ಮನಿರಿ.

ಮಾಲ್ವೋಲಿಯೊ : ಆಮೇಲೆ ರಾಜನೀತಿಜ್ಞನ ಗಾಂಭೀರ್ಯ ಬರುತ್ತೆ ; ಗತ್ತಿನಿಂದ ಬಂದವರ ಮೇಲೆಲ್ಲ ಕಣ್ಣು ಹಾಯಿಸ್ತೀನಿ ; ನನಗೆ ನನ್ನ ಸ್ಥಾನ ಹೇಗೆ ಗೊತ್ತೋ ಅವರೂ ತಮ್ಮ ತಮ್ಮ ಸ್ಥಾನವನ್ನು ತಿಳಿಕೊಳ್ಳಬೇಕೂಂತ ಹೇಳ್ತೀನಿ. ನನ್ನ ಸಂಬಂಧಿ ಸರ್ ಟೋಬಿ ಎಲ್ಲಿ ಅಂತ ವಿಚಾರಿಸ್ತೀನಿ.

ಸರ್ ಟೋಬಿ : (ಮೆಲ್ಲಗೆ) ಎಲ, ಇವನಿಗೆ ಸಿಡಿಲು ಬಡಿಯ!

ಫೇಬಿಯನ್ : (ಮೆಲ್ಲಗೆ) ಸುಮ್ಮನಿರಪ್ಪ, ಸುಮ್ಮನಿರು, ಅಲ್ಲಿ ನೋಡು.

ಮಾಲ್ವೋಲಿಯೊ : ನನ್ನ ಪರಿವಾರದವರಲ್ಲಿ ಏಳು ಜನ ಹೊರಟು ಅವನನ್ನು ಹುಡು ತರ್ತಾರೆ. ಸ್ವಲ್ಪ ಹೊತ್ತು ಮುಖ ಸಿಂಡರಿಸಿಕೊಂಡಿದ್ದು, ಹಾಗೇ ಗಡಿಯಾರಕ್ಕೆ ಕೀಲಿ ಕೊಡ್ತೀನಿ. ಅಥವಾ (ತನ್ನ ಪಾರುಪತ್ತೇದಾರ ಸರವನ್ನು ಕ್ಷಣ ಮುಟ್ಟಿಕೊಂಡು) — ಯಾವುದಾದರೂ ದೊ ಆಭರಣದ ಜೊತೆ ಆಡ್ತಿರ್ತೀನಿ ಅಷ್ಟು ಹೊತ್ತಿಗೆ ಟೋಬಿ ಬರ್ತಾನೆ ನನಗೆ ಅಲ್ಲಿಂದಲೇ ನಮಸ್ಕಾರ ಮಾಡ್ತಾನೆ.

ಸರ್ ಟೋಬಿ : (ಮೆಲ್ಲಗೆ) ಇವನ ಮೂಳೆ ಪುಡಿಮಾಡ್ತೀನಿ.

ಫೇಬಿಯನ್ : (ಮೆಲ್ಲಗೆ) ನಮ್ಮ ಮೌನವನ್ನ ರಥದಲ್ಲಿ ಕೂಡಿಸಿ ಎಳಕೊಂಡ ಹೋಗೋದಾದರೂ ಸರಿ ಸುಮ್ಮನಿರಿ.

ಮಾಲ್ವೋಲಿಯೊ : ಅವನ ಕಡೆ ಹೀಗೆ ಕೈ ಚಾಚ್ತೀನಿ ; ನನ್ನ ಯಾವಾಗಿನ ಮುಗುಳ್ನಗೆಯ ಗಂಭೀರ ಮುಖಮುದ್ರೆಯಲ್ಲಿ ಹುದುಗಿಸಿ —

ಸರ್ ಟೋಬಿ : (ಮೆಲ್ಲಗೆ) ಆಗ 'ಟೋಬಿ' ನಿನ್ನ ಮುಖದ ಮೇಲೆ ಗುದ್ದೋಲ್ಲ ಅಂದ್ಕೊಂಡ್ಯಾ ?

ಮಾಲ್ವೋಲಿಯೊ : "ಟೋಬಿ ಮಾವ, ನಿಮ್ಮ ಸೋದರಸೊಸೆಯಿಂದ ಬಂದ ಅದೃಷ್ಟದಿಂದ ನನಗೆ ಈ ಮಾತಾಡೋ ಅಧಿಕಾರ ಬಂದಿದೆ—"

ಸರ್ ಟೋಬಿ : (ಮೆಲ್ಲಗೆ) ಏನಂದೆ ?

ಮಾಲ್ವೋಲಿಯೊ : "ನೀವು ನಿಮ್ಮ ಕುಡಿಯೋ ಚಟವನ್ನ ಬಿಡಬೇಕು."

ಸರ್ ಟೋಬಿ : (ಮೆಲ್ಲಗೆ) ತೊಲಗೋ, ಅಯೋಗ್ಯ ! (ಏನೋ ಸದ್ದಾದಂತೆ ಮಾಲ್ವೋಲಿಯೋ ತಿರುಗುತ್ತಾನೆ).

ಫೇಬಿಯನ್ : (ಮೆಲ್ಲಗೆ) ಉಹ್ಞೂ, ಸ್ವಲ್ಪ ಸುಮ್ನಿರು. ಇಲ್ಲದಿದ್ರೆ ನಮ್ಮ ಉಪಾಯವೆಲ್ಲ ಹಾಳಾಗಿ ಹೋಗುತ್ತೆ.

ಮಾಲ್ವೋಲಿಯೊ : "ಅಲ್ಲದೆ, ನಿಮ್ಮ ಅಮೂಲ್ಯವಾದ ವೇಳೆಯನ್ನ ಆ ದಡ್ಡ ನೈಟ್ ಜೊತೆ ಕಳೆದು ಹಾಳುಮಾಡ್ತಾ ಇದ್ದೀರಿ."

ಸರ್ ಆಂಡ್ರ್ಯೂ : (ಮೆಲ್ಲಗೆ) ಖಂಡಿತ, ಅದು ನನ್ನ ವಿಷಯ.

ಮಾಲ್ವೋಲಿಯೊ : "ಯಾರೋ ಸರ್ ಆಂಡ್ರ್ಯೂ ಅನ್ನೋ" — (ಕಾಗದವನ್ನು ನೋಡುತ್ತಾನೆ)

ಸರ್ ಆಂಡ್ರ್ಯೂ : (ಮೆಲ್ಲಗೆ) ಅವನು ನನ್ನ ವಿಷಯಾನೇ ಹೇಳಿದ್ದು ಅಂತ ನನಗೆ ಗೊತ್ತಿತ್ತು; ಏಕಂದ್ರೆ, ಎಷ್ಟೋ ಜನ ನನ್ನನ್ನ ದಡ್ಡ ಅಂತ ಕರೀತಾರೆ.

ಮಾಲ್ವೋಲಿಯೊ : (ಕಾಗದವನ್ನು ತೆಗೆದುಕೊಂಡು) ಇದೇನು ಕೆಲಸ ಇಲ್ಲಿ ನಮಗೆ ?

ಫೇಬಿಯನ್ : (ಮೆಲ್ಲಗೆ) ಕಾಡುಕೋಳಿ ಈಗ ಬೋನು ಹತ್ತಿರ ಬಂತು.

ಸರ್ ಟೋಬಿ : (ಮೆಲ್ಲಗೆ) ಜೋರಾಗಿ ಓದೋ ಹಾಗೆ ಪ್ರವೃತ್ತಿ ದೇವತೆ ಅವನಿಗೆ ಪ್ರೇರಣೆ ಮಾಡಲಿ !

ಮಾಲ್ವೋಲಿಯೊ : ನನ್ನಾಣೆ ಇದು ಒಡತಿ ಅಕ್ಷರ ; ಇಲ್ಲಿರೋ "ಕ"ಗಳು "ಉ"ಗಳು "ತ"ಗಳು ಅವರವರೇ, ಅವರು "ಪ" ಅಂತೂ ಹೀಗೇ ಬರೆಯೋದು. ಅನುಮಾನಕ್ಕೆ ಅವಕಾಶನೇ ಇಲ್ಲ, ಅವರದೇ ಬರವಣಿಗೆ.

ಸರ್ ಆಂಡ್ರ್ಯೂ : (ಮೆಲ್ಲಗೆ) ಅವರ ''ಕ''ಗಳು, ''ಉ''ಗಳು ''ತ್ರ''ಗಳು ಅಂದ್ರೇನು?

ಮಾಲ್ವೋಲಿಯೊ : (ಮೇಲುಗಡೆ ಬರೆದದ್ದನ್ನ ಓದುತ್ತಾನೆ) ''ಅಜ್ಞಾತ ಪ್ರಿಯಕರನಿಗೆ, ಈ ಪತ್ರ ನನ್ನ ಶುಭಾಶಯಗಳೊಂದಿಗೆ.'' ಅವರದೇ ಮಾತುಗಳು! ನಿನ್ನ ಅಪ್ಪಣೆಯಿಂದ, ಅರಗು ಮೃದುವಾಗಿ! ಲ್ಯೂಕ್ರೀ ಮುದ್ರೆ, ಅವರು ಬಳಸೋದೂ ಇದನ್ನೇ. ಬರೆದಿರೋದು ನಮ್ಮ ಒಡತೀನೇ. ಇದನ್ನ ಯಾರಿಗೆ ಬರೆದಿರಬಹುದು! (ಲಕೋಟೆ ತೆರೆಯುತ್ತಾನೆ)

ಫೇಬಿಯನ್ : (ಮೆಲ್ಲಗೆ) ಅವನು ಸೋತ, ಯಕೃತ್ತೆಲ್ಲ ಕರಗ್ತು!

ಮಾಲ್ವೋಲಿಯೋ : (ಓದುತ್ತಾನೆ) ನನ್ನ ಪ್ರೀತಿಯ ವಿಷಯ ದೇವರಿಗೆಗೊತ್ತು ;
ಆದರೆ ಒಲಿದಿಹುದಾರನ್ನು?
ನನ್ನ ತುಟಿಗಳಿಗೆ ಹೊಲಿಗೆಯೆ ಬಿತ್ತು!
''ಯಾರೂ ತಿಳಿಯಬಾರದಿದನ್ನು?
''ಯಾರೂ ತಿಳಿಯಬಾರ ದಿದ್ದನ್ನು'' ಮುಂದೇನು?
ಛಂದಸ್ಸು ವ್ಯತ್ಯಾಸವಾಗಿದೆ. (ಯೋಚಿಸಿ) ''ಯಾರೂ
ತಿಳಿಯಬಾರದಿದನ್ನು'' – ಇದು ನಾನೇ ಆಗಿದ್ದರೆ,
ಮಾಲ್ವೋಲಿಯೋ!

ಸರ್ ಟೋಬಿ : (ಮೆಲ್ಲಗೆ) ಎಲ ಕೊಳಕ, ಇವನ ನೇಣು ಹಾಕ!

ಮಾಲ್ವೋಲಿಯೊ : (ಓದುತ್ತಾನೆ) ಆಜ್ಞೆ ಮಾಡಲುಬಹುದು ನಾನು ಪ್ರೇಮಿಸಿದವನ:
ಚಾಕುವಿನ ಅಲಗಂತೆ ಆದರೀಮೌನ,
ರಕ್ತವಿಲ್ಲದೆ ಹೃದಯ ಹೆಪ್ಪುಗಟ್ಟಿಸಿದೆ;
ಮಾಓಆಈ ಇಂದೆನ್ನ ಬದುಕು ತೂಗುತಿದೆ.

ಫೇಬಿಯನ್ : (ಮೆಲ್ಲಗೆ) ಕಂತ್ರಿ ಒಗಟು!

ಸರ್ ಟೋಬಿ : (ಮೆಲ್ಲಗೆ) ಭೇಷ್ ಹುಡುಗಿ ಅಂತೀನಿ ನಾನು.

ಮಾಲ್ವೋಲಿಯೊ : ''ಮಾ ಓ ಆ ಈ ಇಂದೆನ್ನ ಬದುಕು ತೂಗುತಿದೆ.'' ಸರಿ. ಮೊದಲು ಇದೇನು ಅಂತ ನೋಡೋಣ, ನೋಡೋಣ, ನೋಡೋಣ.

ಫೇಬಿಯನ್ : (ಮೆಲ್ಲಗೆ) ಎಂಥ ವಿಷದ ತಿಂಡಿ ಮಾಡಿ ಹಾಕಿದಾಳೆ ಇವನಿಗೆ!

ಸರ್ ಟೋಬಿ : (ಮೆಲ್ಲಗೆ) ಹೇಗೆ ರೆಕ್ಕೆ ಹರಪಿಕೊಂಡು ಈ ಗಿಡುಗ ಅದಕ್ಕೆ ಹಾರ್ತಿದೆ!

ಮಾಲ್ವೋಲಿಯೊ: ''ಆಜ್ಞೆ ಮಾಡಲುಬಹುದು ನಾನು ಪ್ರೇಮಿಸಿದವನ.'' ಹೌದು, ಅವರು ನನಗೆ ಆಜ್ಞೆಮಾಡಬಹುದು; ನಾನು ಅವರ ಸೇವೆಗೆ ಸಿದ್ಧ. ಅವರು ನನ್ನ ಒಡತಿ. ಬುದ್ಧಿ ನೆಟ್ಟಗಿರೋ ಯಾರಿಗಾದರೂ ಇದು ಸ್ಪಷ್ಟವಾಗತ್ತೆ, ಯಾವ ಕಷ್ಟವೂ ಇಲ್ಲ. ಮತ್ತೆ ಈ ಕೊನೇಲಿರೋದು: ಈ ಅಕ್ಷರಗಳು ಏನನ್ನು ಸೂಚಿಸಬಹುದು ! ಇದಕ್ಕೂ ನನಗೂ ಏನಾದ್ರೂ ಸಂಬಂಧ ಇರೋದನ್ನ ಗುರುತಿಸೋದಕ್ಕೆ ಆದ್ರೆ ! ನಿಧಾನ. ಮಾ ಓ ಆ ಈ. —

ಸರ್ ಟೋಬಿ: (ಮೆಲ್ಲಗೆ) ಹೌದು - ಹಾಗಂತಾನೇ ವ್ಯಾಖ್ಯಾನ ಮಾಡು. ಅವನಿಗೇನೂ ವಾಸನೆ ಹತ್ತಿದಹಾಗಿಲ್ಲ, ಇನ್ನೂ.

ಫೇಬಿಯನ್: (ಮೆಲ್ಲಗೆ) ಆದರೂ ಕಂತ್ರಿ ನಾಯಿ ಬೊಗಳತ್ತೆ, ನರಿ ವಾಸನೆ ಬರ್ತಾ ಇದ್ದರೂ.

ಮಾಲ್ವೋಲಿಯೊ: ''ಮಾ'' - ಮಾಲ್ವೋಲಿಯೋ - ''ಮಾ'' - ಹೌದು ನನ್ನ ಹೆಸರಿನ ಮೊದಲ ಅಕ್ಷರ ಅಲ್ಲವೇ ಇದು!

ಫೇಬಿಯನ್: (ಮೆಲ್ಲಗೆ) ಅದನ್ನು ಹೀಗೇ ಗುರುತಿಸ್ತಾನೇಂತ ನಾನಾಗಲೇ ಹೇಳಲಿಲ್ಲವೆ? ಈ ಜೀದಿ ನಾಯಿಗೆ ತಪ್ಪು ವಾಸನೆ ಹಿಡಿಯೋದ್ರಲ್ಲಿ ತುಂಬ ಬುದ್ಧಿ.

ಮಾಲ್ವೋಲಿಯೊ: ''ಮಾ'' - ಆದರೆ ಕ್ರಮ ಸರಿಯಾಗಲ್ಲವಲ್ಲ - ಗುರುತಿಸೋದಕ್ಕೆ ಕಷ್ಟವಾಗುತ್ತೆ. ಲಕಾರ ಬರಬೇಕಾಗಿತ್ತು ''ಓ'' ಬರ್ತಾ ಇದೆಯಲ್ಲ.

ಫೇಬಿಯನ್: (ಮೆಲ್ಲಗೆ) ''ಓ'' ಅಂತಾನೇ ಇದು ಕೊನೆಯಾಗತ್ತೆ. ನಂಗೆ ಖಾತರಿ ಇದೆ.

ಸರ್ ಟೋಬಿ: (ಮೆಲ್ಲಗೆ) ಇಲ್ಲದ್ದಿದ್ರೆ, ನಾನೇ ದೊಣ್ಣೆಯಿಂದ ಬಡಿದು ಅವನು ''ಓ'' ಅಂತ ಕಿರಿಚೋ ಹಾಗೆ ಮಾಡ್ತೀನಿ.

ಮಾಲ್ವೋಲಿಯೊ: ಕೊನೆಯಲ್ಲಿ ''ಈ'' ಬರ್ತಿದೆ.

ಫೇಬಿಯನ್: (ಮೆಲ್ಲಗೆ) ಈ ಇಹ್ಹಿಹ್ಹೀ. ನಿಂಗೆ ಹಿಂದೇನಾದ್ರೂ ಕಣ್ಣಿದ್ದಿದ್ರೆ ಮುಂದೆ ಕಾಣೋ ಗೌರವಕ್ಕಿಂತ ಹಿಂದಿರೋ ಅವಮಾನ ಹೆಚ್ಚಾಗಿ ಕಾಣ್ತಿತ್ತು.

ಮಾಲ್ವೋಲಿಯೊ: ಮಾ ಓ ಆ ಈ - ಇದು ಹಿಂದಿನ ಪದ್ಯದ ಹಾಗೆ ಸ್ಪಷ್ಟವಾಗಿಲ್ಲ. ಆದರೂ ಸ್ವಲ್ಪ ಹಿಂಡಿದ್ರೆ ಸಾಕು, ನನ್ನ ಕಡೆಗೇ ಬಾಗುತ್ತೆ. ಇಲ್ಲಿರೋ

ಎಲ್ಲ ವರ್ಣಗಳೂ ನನ್ನ ಹೆಸರಲ್ಲಿವೆ. ನಿಧಾನ. ಮುಂದೆ ಗದ್ಯ ಇದೆ. (ಓದುತ್ತಾನೆ) "ಇದು ನಿನ್ನ ಕೈಗೆ ಬಂದರೆ, ಸ್ವಲ್ಪ ಯೋಚನೆ ಮಾಡು. ಹುಟ್ಟಿನಿಂದ ನಾನು ನಿನಗಿಂತ ಮೇಲುಮಟ್ಟದವಳು, ಆದರೆ ಮಟ್ಟಕ್ಕೆ ಹೆದರಬೇಡ. ಕೆಲವರು ಹಿರಿಯರಾಗಿ ಹುಟ್ಟುತ್ತಾರೆ, ಕೆಲವರು ಹಿರಿತನವನ್ನು ಸಾಧಿಸುತ್ತಾರೆ, ಮತ್ತೆ ಕೆಲವರ ಮೇಲೆ ಹಿರಿತನವೇ ಬಂದೆರಗುತ್ತದೆ. ನಿನ್ನ ಅದೃಷ್ಟದೇವತೆ ತನ್ನ ತೋಳನ್ನು ತೆರೆಯುತ್ತೆ, ಆಗ ನಿನ್ನ ದೇಹ - ಆತ್ಮಗಳಿಂದ ಅದನ್ನು ತಬ್ಬಿಕೋ. ನೀನು ಏನಾಗಬೇಕಾಗಿದೆಯೋ ಅದಕ್ಕೆ ಹೊಂದಿಕೊಳ್ಳುವುದಕ್ಕೋಸ್ಕರ ನಿನ್ನ ದೈನ್ಯದ ಪೊರೆಯನ್ನ ಕಳಚಿ ಹಾಕಿ ಹೊಸದಾಗಿ ಕಾಣು. ಸಂಬಂಧಿಕನೊಬ್ಬನನ್ನು ವಿರೋಧಿಸು, ಸೇವಕರ ಹತ್ತಿರ ಜಬರ್ದಸ್ತಿನಿಂದಿರು, ನಿನ್ನ ನಾಲಗೆ ಮೇಲೆ ರಾಜನೀತಿ ವಿಷಯಗಳೇ ತುಂಬಿರಲಿ, ವಿಶಿಷ್ಟವಾಗಿ ಕಾಣುವಂತಹ ನಡವಳಿಕೆಯನ್ನ ಅಭ್ಯಾಸ ಮಾಡಿಕೋ, ನಿನಗಾಗಿ ನಿಟ್ಟುಸಿರು ಬಿಡುತ್ತಿರುವವಳು ಈ ರೀತಿ ಸೂಚಿಸುತ್ತಿದ್ದಾಳೆ. ನೆನಪಿಸಿಕೋ, ನಿನ್ನ ಹಳದಿ ಕಾಲುಚೀಲಗಳನ್ನು ಮೆಚ್ಚಿದವರು ಯಾರು ? ನೀನು ಗಾರ್ಟರ್ ಅಡ್ಡಪಟ್ಟಿ ಹಾಕಿಕೊಂಡಾಗ ಕಂಡು ಇಷ್ಟಪಡುವವರಾರು ಅನ್ನೋದನ್ನ ಜ್ಞಾಪಿಸಿಕೋ. ಜ್ಞಾಪಿಸಿಕೋ ಅಂತ ಹೇಳ್ತಾ ಇದ್ದೇನೆ. ನಿನ್ನ ಭವಿಷ್ಯ ಉಜ್ವಲವಾಗಿದೆ, ಅದನ್ನ ಬಯಸುವುದಾದರೆ ಹೊರಡು ; ಇಲ್ಲದಿದ್ದರೆ ನೀನು ಪಾರುಪತ್ತೇದಾರನಾಗಿಯೇ ಉಳಿಯುತ್ತೀಯೆ. ಸೇವಕರ ಜೊತೆಯಲ್ಲಿದ್ದು ಕೊಂಡು, ಅದೃಷ್ಟದ ಬೆರಳುಗಳನ್ನು ಮುಟ್ಟಲು ಅಯೋಗ್ಯನಾಗಿರೋ ಅಂತಹ ನಿನ್ನನ್ನು ನಾನು ನೋಡುತ್ತಿರಬೇಕಾಗುತ್ತದೆ. ನಮಸ್ಕಾರ. ಇಂತಿ, ನಿಮ್ಮೊಡನೆ ನನ್ನ ಸ್ಥಿತಿಯನ್ನು ವಿನಿಮಯ ಮಾಡಿಕೊಳ್ಳಲು ಬಯಸುವ,

ಅದೃಷ್ಟವಂತ ಅಸುಖಿ."

ಹಗಲು, ಬಯಲು - ಇವುಗಳು ಕೂಡ ಇಷ್ಟು ಸ್ಪಷ್ಟವಾಗಿರೋಲ್ಲ. ಈ ದಾರಿ ಸುಗಮವಾಗಿದೆ. ನಾನು ಗತ್ತಿನಿಂದಿರ್ತೀನಿ, ರಾಜನೀತಿಜ್ಞರ ಪುಸ್ತಕಗಳನ್ನೋದ್ತೀನಿ. ಸರ್ ಟೋಬಿಗೆ ಎಲ್ಲರ ಮುಂದೆ ಛೀಮಾರಿ ಹಾಕ್ತೀನಿ, ಅಸಂಸ್ಕೃತರ ಜೊತೆ ಸಲಿಗೆ ಬಿಡ್ತೀನಿ, ಪ್ರತಿ ಅಂಶದಲ್ಲೂ ಘನವಂತನಾಗ್ತೀನಿ. ಬರೀ ಕಲ್ಪನೆಗಳಿಂದ ನಾನು ನನ್ನನ್ನ ಮೋಸಮಾಡ್ಕೋತಿಲ್ಲ, ಯಾಕೆಂದರೆ ಪ್ರತಿ ಅಂಶವೂ ಒಡತಿ ನನ್ನ

ಪ್ರೀತಿಸ್ತಾರೆ ಅನ್ನೋದನ್ನ ದೃಢಮಾಡ್ತಿದೆ. ಇತ್ತೀಚೆಗೆ ಅವರು ನನ್ನ ಹಳದಿ ಕಾಲುಚೀಲಗಳನ್ನು ಮೆಚ್ಚಿಕೊಂಡಿದ್ರು, ಗಾರ್ಟರ್ ಅಡ್ಡಪಟ್ಟಿ ಹಾಕಿದ್ದ ನನ್ನ ಕಾಲನ್ನ ಹೊಗಳಿದ್ರು. ಈಗ, ಹೀಗೆ ಕಾಗದದಲ್ಲಿ ಅವರು ನನ್ನ ಮೇಲಿನ ಪ್ರೀತೀನ ವ್ಯಕ್ತಪಡಿಸಿದ್ದಾರೆ, ಒಂದು ರೀತಿ ಆಜ್ಞೆಗ್ಳಿಂದ ತಮಗೆ ಇಷ್ಟವಾದ್ದನ್ನ ನಂಗೆ ಸೂಚಿಸ್ತಿದ್ದಾರೆ. ನನ್ನ ನಕ್ಷತ್ರಗಳು ಚೆನ್ನಾಗಿವೆ, ನಾನು ಅದೃಷ್ಟವಂತ. ಬೇಗ ಹಳದಿ ಕಾಲುಚೀಲ, ಗಾರ್ಟರ್ ಅಡ್ಡ ಪಟ್ಟಿ ಹಾಕಿಕೊಂಡು ನಾನು ಎಲ್ಲರಿಗಿಂತ ವಿಶಿಷ್ಟವಾಗಿರ್ತೀನಿ, ದರ್ಪದಿಂದ ಇರ್ತೀನಿ. ದೇವರೇ, ನನ್ನ ನಕ್ಷತ್ರಗಳಿಗೆ ಕೃತಜ್ಞನಾಗಿರಬೇಕು! ಓ, ಇಲ್ಲಿ ಮರೆತ ವಿಷಯ ಬೇರೆ ಬರೆದಿದೆ!

(ಓದುತ್ತಾನೆ) ''ನಾನು ಯಾರೆಂಬುದನ್ನು ನೀನು ತಿಳಿಯದೇ ಇರುವುದು ಸಾಧ್ಯವಿಲ್ಲ, ನೀನು ನನ್ನನ್ನು ಪ್ರೇಮಿಸುವುದಾದರೆ ಅದು ನಿನ್ನ ಮುಗುಳ್ನಗೆಯಲ್ಲಿ ಕಾಣಿಸಿಕೊಳ್ಳಲಿ, ನಗುವಾಗ ನೀನು ಮುದ್ದಾಗಿ ಕಾಣಿಸುತ್ತೀಯೆ. ಆದ್ದರಿಂದ ನನ್ನೆದುರಿಗೆ ಇರುವಾಗಲೆಲ್ಲ ನೀನು ನಗುನಗುತ್ತಲೇ ಇರಬೇಕು. ನನ್ನ ಮುದ್ದೆ, ಇದೇ ನನ್ನ ಬೇಡಿಕೆ.'' ದೇವರೇ, ನಾನು ನಿನಗೆಷ್ಟು ನಮಸ್ಕಾರ ಮಾಡಿದ್ರೂ ಸಾಲದು. (ತನ್ನ ಕೈಗಳನ್ನ ಆಕಾಶದೆಡೆಗೆ ಎತ್ತಿ ಕೈ ಮುಗಿಯುತ್ತಾನೆ). ನಾನು ನಗುನಗುತ್ತಲೇ ಇರ್ತೀನಿ, ನೀವೇನು ಹೇಳಿದ್ರೂ ನಾನದನ್ನ ಮಾಡ್ತೀನಿ.

(ಒಳಗೆ ಹೋಗುತ್ತಾನೆ)

ಫೇಬಿಯನ್ : ಸೂಫಿ ನನಗೆ ಸಾವಿರ ವರಹ ಬಕ್ಷೀಸು ಕೊಡ್ತೀನಿ ಅಂದ್ರೂ ಈ ತಮಾಷೇನ ನಾನು ಕಳಕೊಳ್ಳಲಾರೆ.

ಸರ್ ಟೋಬಿ : ಈ ಉಪಾಯ ಮಾಡಿದ್ದರಿಂದ ಈ ಘಟವಾಣಿ ಹೆಣ್ಣನ್ನು ಮದುವೆಯಾಗೋಕ್ಕೆ ನಾನು ತಯಾರು!

ಸರ್ ಆಂಡ್ರ್ಯೂ : ನಾನೂ ತಯಾರು!

ಸರ್ ಟೋಬಿ : ಇಂಥ ಇನ್ನೊಂದು ತಮಾಷೆ ಸಾಕು, ನಂಗೆ ವರದಕ್ಷಿಣೇನೇ ಬೇಡ.

ಸರ್ ಆಂಡ್ರ್ಯೂ : ನಂಗೂ ಬೇಡ.

(ಮನೆಯಿಂದ ಮರೀಯ ಬರುತ್ತಾಳೆ)

ಫೇಬಿಯನ್ : ಇಗೋ ಮೂರ್ಖಜನಮರ್ದಿನಿ ಬರ್ತಿದಾಳೆ.

ಸರ್ ಟೋಬಿ : ನೀನು ನನ್ನ ಕುತ್ತಿಗೇ ಮೇಲೆ ಕಾಲಿಡ್ತೀಯೇನು ?

ಸರ್ ಆಂಡ್ರ್ಯೂ : ಅಥವಾ ನನ್ನದ್ರ ಮೇಲೋ ?

ಸರ್ ಟೋಬಿ : ನನ್ನ ಸ್ವಾತಂತ್ರ್ಯನೇ ಒತ್ತೆಯಿಟ್ಟು ಪಗಡೆಯಾಡಿ ನಿನ್ನ ಗುಲಾಮನಾಗಲಾ ?

ಸರ್ ಆಂಡ್ರ್ಯೂ : ಅಥವಾ ಖಂಡಿತ, ನಾನಾಗಲೋ ?

ಸರ್ ಟೋಬಿ : (ಮರೀಯಳಿಗೆ) ನೀನವನನ್ನ ಎಂಥ ಕನಸ್ನಲ್ಲಿ ಇಳಿಸಿಬಿಟ್ಟಿದ್ದೀಯ ಅಂದ್ರೆ ಆ ಚಿತ್ರ ಅವನಿಂದ ದೂರ ಆದ್ರೆ ಹುಚ್ಚನೇ ಆಗ್ಬಿಡ್ತಾನೆ ಅವನು.

ಮರೀಯ: ಇಲ್ಲ ನಿಜ ಹೇಳಿ, ಅದು ಅವನ ಮೇಲೆ ಕೆಲಸ ಮಾಡಿದೆಯಾ ?

ಸರ್ ಟೋಬಿ : ಓ, ಸೂಲಗಿತ್ತೀ ಮೇಲೆ ಸಾರಾಯಿ ಮಾಡಿದ ಹಾಗೆ.

ಮರೀಯ: ಹಾಗಾದ್ರೆ, ಈ ಉಪಾಯದ ಫಲಾನೂ ಬೇಕಾದ್ರೆ ನೋಡಿ. ಅವನು ಒಡತೀರ ಹತ್ರ ಮೊದಲ ಸಲ ಹೋಗೋದನ್ನ ಗಮನಿಸಬೇಕು ಅವನು ಹಳದಿ ಕಾಲು ಚೀಲ ಹಾಕ್ಕೊಂಡು ಬರ್ತಾನೆ, ಅವರಿಗೋ ಆ ಬಣ್ಣ ಕಂಡ್ರೆ ಆಗೋಲ್ಲ, ಅದನ್ನಂತೂ ಅವರು ದ್ವೇಷಿಸ್ತಾರೆ. ಅವನು ಅವರ ಮುಂದೆ ನಗುನಗ್ತಾ ಇರ್ತಾನೆ, ಅವರ ದುಃಖದ ಸ್ಥಿತೀಲಿ ಇದು ತೀರ ಅನುಚಿತವಾಗಿರತ್ತೆ. ಅದರಿಂದಾಗಿ ಅವನ ಮೇಲೆ ಅವರ ತಿರಸ್ಕಾರ ಅಪಾರವಾಗ್ಬಿಡತ್ತೆ. ಅದನ್ನು ನೋಡ್ಬೇಕೂಂತ ಇದ್ರೆ ನನ್ಜೊತೆ ಬನ್ನಿ.

ಸರ್ ಟೋಬಿ : ಓ ಹಾಸ್ಯದ ಅಧಿಭೂತವೇ, ನರಕದ ಬಾಗಿಲಿಗಾದ್ರೂ ಬರ್ತೀನಿ ನಡಿ.

ಸರ್ ಆಂಡ್ರ್ಯೂ : ನಾನೂ ಜೊತೆಗೆ ಬರ್ತೀನಿ.

(ಅವರು ಮನೆಯೊಳಗೆ ಹೋಗುತ್ತಾರೆ)

--------

## ಮೂರನೇ ಅಂಕ

# ದೃಶ್ಯ ಒಂದು

ಒಲವಿಯಳ ಉದ್ಯಾನ

(ನಕಲಿಯು ಪೈಪ್ ಮತ್ತು ಖಂಜರ ಹಿಡಿದು ಬರುತ್ತಾನೆ ; ಅವನು ವಾದ್ಯವನ್ನು ನುಡಿಸುತ್ತಿದ್ದಾನೆ, ಅವನು ಮುಗಿಸುತ್ತಿದ್ದಂತೆಯೇ ವಯೋಲ ಹೊರಗಿನ ಬಾಗಿಲಿಂದ ಬರುತ್ತಾಳೆ)

ವಯೋಲ: ಅಯ್ಯ ಮಿತ್ರ, ನಿನ್ನನ್ನೂ ನಿನ್ನ ಸಂಗೀತವನ್ನೂ ದೇವರೇ ಕಾಪಾಡಲಿ. ನಿನಗೆ ಖಂಜರವೇ ಆಶ್ರಯವೇನು ?

ನಕಲಿ: ಇಲ್ಲ ಸ್ವಾಮಿ, ಭೂಮಿಯ ಆಶ್ರಯ ನಂಗೆ.

ವಯೋಲ: ಅಂದ್ರೆ ವ್ಯವಸಾಯ ಮಾಡ್ತೀಯೇನು ?

ನಕಲಿ: ಅಲ್ಲವೇ ಅಲ್ಲ. ನನಗೆ ನನ್ನ ಮನೆಯೇ ಆಶ್ರಯ, ಆದರೆ ಆ ಮನೆಗೆ ಭೂಮಿ ಆಶ್ರಯ ಅಷ್ಟೇ !

ವಯೋಲ: ಅರಮನೆ ಹತ್ತಿರ ಭಿಕ್ಷುಕ ವಾಸ ಮಾಡ್ತಾ ಇದ್ದರೆ, ರಾಜನಿಗೂ ಭಿಕ್ಷುಕನಿಗೂ ಹತ್ತಿರದ ಸಂಬಂಧ ಇದೇಂತಲೂ ನೀನು ಹೇಳಬಹುದು. ನಿನ್ನ ಖಂಜರಕ್ಕೆ ಗೋಡೇಲಿ ಹೊಡೆದಿರೋ ಮೊಳೇನೇ ಆಶ್ರಯ ಅಂದರೆ, ಆ ಮೊಳೆಗೆ ಖಂಜರವೇ ಆಶ್ರಯ ಅಂತ ಅಲ್ಲವೇ ನಿನ್ನ ವಾದ ?

ನಕಲಿ: ಸರಿಯಾಗಿ ಹೇಳಿದಿರಿ ಸ್ವಾಮಿ. ಈ ಕಾಲ ನೋಡಿ ! ಪದಗಳು ಅನ್ನೋದು ಒಳ್ಳೆ ಚುರುಕಾದವನಿಗೆ ರಬ್ಬರ್ ಚೀಲ ಇದ್ದಾಗೆ – ಒಂದು ಕ್ಷಣದಲ್ಲಿ ತಪ್ಪು ಭಾಗವನ್ನು ತಲೆಕೆಳಗು ಮಾಡಿ ತೋರಿಸಬಹುದು.

ವಯೋಲ: ಹ್ಞಾ, ಅದು ನಿಜ. ಪದಗಳ ಮೇಲೆ ಸುಲಭವಾಗಿ ಆಟವಾಡೋ ಜನ ಅದನ್ನ ತುಂಬ ಬೇಗ ಕೆಡಿಸಿಬಿಡ್ತಾರೆ.

ನಕಲಿ: ಅದಕ್ಕೇ ನನ್ನ ತಂಗೀಗೆ ಹೆಸರಿರೋದೆ ನಂಗೆ ಇಷ್ಟವಿಲ್ಲ.

ವಯೋಲ: ಯಾಕಪ್ಪ?

ನಕಲಿ: ಯಾಕೇ ಅಂದ್ರೆ, ನನ್ನ ತಂಗೀ ಹೆಸರೂ ಒಂದು ಪದತಾನೇ. ಆ ಪದದ ಜೊತೆಗೆ ಆಟವಾಡೋದು ಅಂದ್ರೆ ಅವಳನ್ನ ಕೆಡಿಸಿದ ಹಾಗೇ ತಾನೆ. ಆದರೆ ನಿಜವಾಗಿ, ಶಬ್ದಗಳು ಅಂದ್ರೆ ಪೋಕರಿಗಳು ಸ್ವಾಮಿ, ಯಾಕಂದ್ರೆ ಕರಾರು ಪತ್ರಗಳು ಅವಕ್ಕೆ ಅವಮಾನ ಮಾಡಿವೆ.

ವಯೋಲ: ಅದಕ್ಕೇನು ಕಾರಣವಪ್ಪ?

ನಕಲಿ: ನಿಜವಾಗಿ ಸ್ವಾಮಿ, ಮಾತಿಲ್ಲದೆ ಏನನ್ನೂ ನಿಮಗೆ ತಿಳಿಸಲು ಸಾಧ್ಯವಿಲ್ಲ. ಆದರೆ ಶಬ್ದಗಳು ಎಷ್ಟು ಅಬದ್ಧವಾಗಿಬಿಟ್ಟಿವೆಯೆಂದರೆ ಸತ್ಯವಾದದ್ದೇನನ್ನೂ ಅವುಗಳ ಮೂಲಕ ತೋರಿಸುವುದು ನನಗಿಷ್ಟವಿಲ್ಲ.

ವಯೋಲ: ನೀನೊಬ್ಬ ಖುಷಿ ಮನುಷ್ಯ, ಯಾವುದನ್ನೂ ನೀನು ಲೆಕ್ಕಿಸುವುದಿಲ್ಲ ಅನ್ನೋದು ನನಗೆ ಗೊತ್ತಾಗುತ್ತೆ.

ನಕಲಿ: ಅದು ಸರಿಯಲ್ಲ, ಸ್ವಾಮಿ. ನಾನು ಕೆಲವು ವಿಷಯವನ್ನ ಲೆಕ್ಕಿಸ್ತೀನಿ. ಆದರೆ ನನ್ನ ಆತ್ಮಸಾಕ್ಷಿಯಾಗಿ, ನಿಮ್ಮನ್ನ ಲೆಕ್ಕಿಸೋದಿಲ್ಲ. ಇದೇ ಯಾವುದನ್ನೂ ಲೆಕ್ಕಿಸದೇ ಇರೋದು ಅನ್ನೋದಾದ್ರೆ, ಅದರಿಂದ ನೀವು ಮಂಗಮಾಯವಾಗ್ಬೇಕಾಗಿತ್ತು.

ವಯೋಲ: ನೀನು ಒಲಿವಿಯ ದೇವಿಯವರ ನಕಲಿ ಅಲ್ಲವೇ?

ನಕಲಿ: ಖಂಡಿತ ಅಲ್ಲ, ಒಲಿವಿಯ ದೇವಿಯವರ ಬಳಿ ನಕಲೀದು ಯಾವುದೂ ಇಲ್ಲ, ಅವರಿಗೆ ಮದುವೆಯಾಗೋವರೆಗೂ ಅವರು ಯಾವ ನಕಲೀನೂ ಇಟ್ಟುಕೊಳ್ಳೋದಿಲ್ಲ. ಪಿಲ್ಚರ್ಡ್ ಮೀನುಗಳಿಗೆ ಹೆರ್ರಿಂಗ್ ಮೀನುಗಳು ಹೇಗೋ ಹಾಗೇನೇ ನಕಲಿಗಳು ಗಂಡಂದಿರಿಗೆ – ಗಂಡಂದಿರೆ ದೊಡ್ಡೋರು. ನಾನು ಅವರ ನಕಲಿ ಅಲ್ಲ, ಅವರ ಶಬ್ದ ಸೂತಕಿ.

ವಯೋಲ: ನಿನ್ನನ್ನ ಈಚೆಗೆ ಕೌಂಟ್ ಆರ್ಸಿನೋರ ಹತ್ತಿರ ನೋಡಿದ್ದೆನಲ್ಲ.

ನಕಲಿ: ಸ್ವಾಮಿ, ನಕಲಿ ಅನ್ನೋದು ಸೂರ್ಯನ ಹಾಗೆ ಜಗತ್ತನ್ನೆಲ್ಲ ಸುತ್ತುತ್ತೆ, ಎಲ್ಲ ಕಡೆ ಬೆಳಗತ್ತೆ. ನಕಲಿ ನಮ್ಮ ಒಡತೀರ ಹತ್ರ ಹೇಗೋ ನಿಮ್ಮ ಒಡೆಯರ ಹತ್ರಾನು ಹಾಗೇ ಆಗಾಗ್ಗ ಇರಬೇಕು, ಇಲ್ಲದಿದ್ದರೆ ನಂಗೆ ಬೇಸರ. ನಾನು ನಿಮ್ಮ ಅಸಲಿತನಾನ ಅಲ್ಲಿ ಕಂಡ ಹಾಗಿತ್ತು.

ವಯೋಲ: ಉಹ್ಞೂ, ಹೀಗೆ ನೀನು ನನ್ನ ಜೊತೆ ಮಾತಿನಲ್ಲಿ ಗುದ್ದಾಡೋದಾದರೆ, ನಾನು ಮಾತಾಡೋದೆ ಇಲ್ಲ ತಗೋ ನಿನ್ನ ಖರ್ಚಿಗೆ (ಅವನಿಗೆ ಒಂದು ನಾಣ್ಯ ಕೊಡುತ್ತಾಳೆ).

ನಕಲಿ: (ನಾಣ್ಯವನ್ನು ತನ್ನ ಅಂಗೈಯಲ್ಲಿಟ್ಟುಕೊಂಡು ನಿಟ್ಟಿಸುತ್ತ) ದೇವರು ಮುಂದಿನ ಸಲ ಕೂದಲು ಕೊಡೋವಾಗ ನಿಮಗ ಒಂದು ಗಡ್ಡಾನೂ ಕಳಿಸಲಿ!

ವಯೋಲ: ನಿಜವಾಗಿ ನಿನ್ನ ಹತ್ರ ಹೇಳ್ತಾ ಇದ್ದೇನೆ – ಅದೊಂದು ಇಲ್ದೆ ನನಗಂತೂ ಹುಚ್ಚೇ ಹಿಡಿದ ಹಾಗಾಗಿದೆ – (ತನ್ನಲ್ಲಿ) ತನ್ನ ಕೆನ್ನೆಗಳ ಮೇಲೆ ಅದು ತಾನಾಗಿ ಬೆಳೀದಿದ್ದರೂ. (ಜೋರಾಗಿ) ನಿಮ್ಮ ಒಡತೀರು ಮನೇಲಿದ್ದಾರೇನು?

ನಕಲಿ: (ಇನ್ನೂ ನಾಣ್ಯದತ್ತ ದಿಟ್ಟಿಸುತ್ತ) ಸ್ವಾಮಿ, ಇದರ ಜೊತೆಗೆ ಇನ್ನೊಂದು ಇದ್ದಿದ್ರೆ ಅದರ ಜೊತೆ ಸೇರಿ ಮರಿಹಾಕ್ತಾ ಇತ್ತು ಅಲ್ವಾ?

ವಯೋಲ: ಹೌದು, ಕೂಡಿ ಹಾಕಿ ಬಡ್ಡಿಗೆ ಕೊಟ್ಟರೆ ಹಾಕತ್ತೆ.

ನಕಲಿ: ಸ್ವಾಮಿ, ಈ ಟ್ರಾಯ್ಲಸ್‌ಗೆ ಒಬ್ಬಳು ಕ್ರೆಸಿಡಾಳನ್ನ ತರೋಕೆ ನಾನು ಫ್ರಿಜಿಯದ ಲಾರ್ಡ್ ಪಂಡರಸ್ ಆಗ್ತೀನಿ.

ವಯೋಲ: ನೀನು ಹೇಳಿದ್ದು ನಂಗೆ ಅರ್ಥವಾಯಿತು. ಚೆನ್ನಾಗಿ ಭಿಕ್ಷೆ ಕೇಳ್ತಿ.

(ಅವಳು ಇನ್ನೊಂದು ನಾಣ್ಯವನ್ನು ಕೊಡುತ್ತಾಳೆ.)

ನಕಲಿ: ವಿಷಯ ಅಷ್ಟೇನೂ ಮಹತ್ವದ್ದಲ್ಲ ಅಂತ ಅಂದ್ಕೊಂಡಿದ್ದೀನಿ, ಸ್ವಾಮಿ ಭಿಕ್ಷುಕಳನ್ನ ಭಿಕ್ಷೆ ಕೇಳೋದು, ಅಷ್ಟೆ. ಕ್ರೆಸಿಡಾ ಭಿಕ್ಷುಕಳಾಗಿದ್ದಳು. ನಮ್ಮ ಒಡತೀರು ಒಳಗಿದಾರೆ, ಸ್ವಾಮಿ. ನೀವೆಲ್ಲಿಂದ ಬಂದಿದ್ದೀರಿ ಅನ್ನೋದನ್ನ ನಾನವರಿಗೆ ಹೇಳ್ತೀನಿ, ಆದರೆ ನೀವು ಯಾರು, ಯಾಕೆ, ಬಂದಿದ್ದೀರಿ ಅನ್ನೋದು ನನ್ನ ಕ್ಷೇತ್ರಕ್ಕೆ ಹೊರತಾದ್ದು. ಅದನ್ನ ಜಾಗ ಅಂತಾನೂ ಕರೀಬಹುದು, ಆದರೆ ಬಳಸಿ ಬಳಸಿ ಅದು ಸವಕಲಾಗಿದೆ. (ಒಳಗೆ ಹೋಗುತ್ತಾನೆ)

ವಯೋಲ: ಇವನಿಗೆ ನಕಲಿಯಾಗಲು ತಕ್ಕ ಅಸಲಿತನವಿದೆ;
ಅದನ್ನು ಚೆನ್ನಾಗಿ ನಿರ್ವಹಿಸಲು ಮಾತಿನ ಚಾತುರ್ಯ ಬೇಕು,
ಯಾರನ್ನ ಹಾಸ್ಯ ಮಾಡುತ್ತಾನೋ ಅವರ ಮನಸ್ಸರಿಯಬೇಕು,

ಜನರ ಗುಣ, ಕಾಲಸ್ಥಿತಿಗಳ ಅರಿವಿರಬೇಕು.
ಕಣ್ಣಿಗೆ ಬಿದ್ದ ಹಕ್ಕಿಯ ಮೇಲೆ ಎರಗುವ
ಡೇಗೆಯಂತೆ ಗಮನ ಹಾಯಿಸಬೇಕು.
ಇದೊಂದು ಕಲೆ, ಜೊತೆಗೆ ಅಭ್ಯಾಸವೂ ಬೇಕು.
ಜಾಣ್ಮೆಯಿಂದಾಡುವ ಚತುರೋಕ್ತಿ ಇದಕ್ಕೆ ಸರಿ.
ಆದರೆ ಚತುರೋಕ್ತಿಯನ್ನಾಡುವ ಜಾಣರು ಪೆದ್ದಾಗಿ
ತಮ್ಮ ಮೂರ್ಖತನವನ್ನೇ ತೋರಿಸುವುದುಂಟು.
(ಸರ್ ಟೋಬಿ ಬೆಲ್ಚ್ ಮತ್ತು ಸರ್ ಆಂಡ್ರ್ಯೂ ಅಗ್ಯುಚೀಕ್ ಬರುತ್ತಾರೆ)

ಸರ್ ಟೋಬಿ : ನಿಮಗೆ ದೇವರು ಒಳ್ಳೇದು ಮಾಡಲಿ, ಸ್ವಾಮಿ.

ವಯೋಲ: ನಿಮಗೂ ಸ್ವಾಮಿ.

ಸರ್ ಆಂಡ್ರ್ಯೂ : (ನಮಸ್ಕರಿಸುತ್ತ) ಪರಮಾತ್ಮ ತಮಗೆ ಕಲ್ಯಾಣ ಮಾಡಲಿ.

ವಯೋಲ: (ಬಾಗಿ) ತಮಗೂ, ತಮ್ಮ ಸೇವಕ.

ಸರ್ ಆಂಡ್ರ್ಯೂ : ನೀವು ಹಾಗೇ ಅಂದ್ಕೊಂಡಿದ್ದೇನೆ – ನಾನು ನಿಮಗೆ ಹಾಗೇ.

ಸರ್ ಟೋಬಿ : ಗೃಹವನ್ನು ಪ್ರವೇಶಿಸುವಂಥವರಾಗಿ, ನಿಮಗೆ ನನ್ನ ಸೋದರ ಸೊಸೆ ಜೊತೆ ಕೆಲಸವಿದ್ದರೆ ನೀವು ಒಳಗೆ ಹೋಗಬೇಕೂಂತ ಅವರ ಇಚ್ಛೆ.

ವಯೋಲ: ನಿಮ್ಮ ಸೋದರ ಸೊಸೆಯನ್ನು ನೋಡೋದಕ್ಕೇ ನಾನು ಬಂದಿರೋದು. ನನ್ನ ಪ್ರಯಾಣದ ಗುರಿಯೇ ಅವರು.

ಸರ್ ಟೋಬಿ : ತಮ್ಮ ಪಾದಗಳನ್ನು ಬಳಸಿ ಸ್ವಾಮಿ, ಪಾದ ಬೆಳೆಸಿ.

ವಯೋಲ: ಪಾದಗಳನ್ನ ಬಳಸಿ ಅಂತ ನೀವು ಹೇಳಿದಾಗ ನನಗೆ ಗೊತ್ತಾದ್ದಕ್ಕಿಂತ ಚೆನ್ನಾಗಿ ನಾನು ಏನನ್ನ ಬಳಸಬೇಕು ಅಂತ ನನ್ನ ಪಾದಕ್ಕೆ ಗೊತ್ತಿದೆ.

ಸರ್ ಟೋಬಿ : ನನ್ನ ಅರ್ಥ, ಬನ್ನಿ, ದಯಮಾಡಿ ಅಂತ.

ವಯೋಲ: ಬಂದು ದಯೆ ಮಾಡ್ತಿದ್ದೆ – ಆದರೆ ಅದರ ಅವಶ್ಯಕತೆ ಇಲ್ಲವಲ್ಲ (ಒಲಿವಿಯ ಮರೀಯಳ ಜೊತೆ ಮನೆಯೊಳಗಿಂದ ಬರುತ್ತಾಳೆ) ಘನತೆವೆತ್ತ ದೇವಿಯಾದ ತಮ್ಮ ಮೇಲೆ ದೇವರು ''ದಯಾಮೃತ''ವನ್ನು ಸುರಿಸಲಿ !

ಸರ್ ಆಂಡ್ರ್ಯೂ : ಈ ಯುವಕ ಅಪರೂಪದ ಆಸ್ಥಾನಿಕ – ''ದಯಾಮೃತ ಸುರಿಸಲಿ'' – ಭೇಷ್ !

ವಯೋಲ : ನಿಮ್ಮ ಕಲ್ಪಕವೂ ಅನುಗ್ರಹ ಭರಿತವೂ ಆದ ಕಿವಿಗಳಿಗೆ ಮಾತ್ರ ನನ್ನ ಸಂದೇಶವು ಕಾದಿದೆ.

ಸರ್ ಆಂಡ್ರ್ಯೂ : ''ದಯಾಮೃತ'', ''ಕಲ್ಪಕ'', ''ಅನುಗ್ರಹಭರಿತ'' : ಮುಂದೆ ಬಳಸೋದಕ್ಕೆ ಈ ಮೂರನ್ನೂ ಉರುಹೋಡೀತೀನಿ.

ಒಲಿವಿಯ : ತೋಟದ ಬಾಗಿಲು ಹಾಕಿ ; ಇವರ ಮಾತನ್ನ ನಾನೊಬ್ಬಳೇ ಕೇಳಲು ಅವಕಾಶ ಕೊಡಿ. (ಸರ್ ಟೋಬಿ, ಸರ್ ಆಂಡ್ರ್ಯೂ, ಮರಿಯ ಹೋಗುತ್ತಾರೆ) ನಿಮ್ಮ ಕೈಯನ್ನು ನೀಡಿ, ಸ್ವಾಮಿ.

ವಯೋಲ : (ಬಾಗಿ) ಅದು ನನ್ನ ಕರ್ತವ್ಯ ; ತಮ್ಮ ಅತ್ಯಂತ ವಿನಮ್ರ ಸೇವಕ.

ಒಲಿವಿಯ : ನಿಮ್ಮ ಹೆಸರೇನು ?

ವಯೋಲ : ಚೆಲುವೆ ರಾಣಿ, ಸಿಸೇರಿಯೋ ಈ ಸೇವಕನ ಹೆಸರು.

ಒಲಿವಿಯ : ನನ್ನ ಸೇವಕ ಎಂದಿರಾ ? ಸೋಗಿನ ದೈನ್ಯವನ್ನೇ
ಅಭಿನಂದನೆಯೆಂದು ಭಾವಿಸಿದ್ದರಿಂದ ಈ ಜಗತ್ತು
ತನ್ನ ಸಂತೋಷವನ್ನೇ ಕಳೆದುಕೊಂಡಿತು.
ಯುವಕ ನೀವು ಕೌಂಟ್ ಆರ್ಸಿನೋರ ಸೇವಕ.

ವಯೋಲ : ಅವರೂ, ಅವರ ಸೇವಕರೂ ನಿಮ್ಮ ಸೇವಕರು ;
ನಿಮ್ಮ ದಾಸರ ದಾಸ, ನಿಮ್ಮ ದಾಸನೂ ಹೌದು.

ಒಲಿವಿಯ : ಅವರಿಗಿರಬಹುದು, ನಾನವರ ಬಗ್ಗೆ ಯೋಚಿಸುತ್ತಿಲ್ಲ.
ಅವರ ಮನಸ್ಸು ನನ್ನಿಂದ ತುಂಬಿರದೆ
ಬರಿದಾಗಿದ್ದರೂ ಚೆನ್ನಾಗಿರುತ್ತಿತ್ತು.

ವಯೋಲ : ದೇವಿ, ನಿಮ್ಮ ಮಧುರ ಭಾವಗಳನ್ನು
ಅವರ ಪರವಾಗಿ ಉದ್ದೀಪಿಸಲು ಬಂದಿದ್ದೇನೆ.

ವಯೋಲ : ಓ ದಯವಿಟ್ಟು ಕೃಪೆ ಮಾಡಿ ;
ಅವರ ಬಗ್ಗೆ ಮತ್ತೊಮ್ಮೆ ಮಾತನಾಡದಿರಲು ಹೇಳಿದೆನಲ್ಲ;
ಇನ್ನಾರ ಪರವಾಗಿ ನೀವು ಪ್ರಣಯಾರ್ಥಿಯಾಗಿದ್ದರೂ

ಗೋಳಗಳ ಸ್ವರಮೇಳ ಕೇಳುವುದನ್ನು ಬಿಟ್ಟು
ನಿಮ್ಮ ಮನಸಿಗೆ ನಾನು ಕಿವಿಗೊಡುತ್ತಿದ್ದೆ.

ವಯೋಲ: ಪ್ರಿಯ ಒಡತಿ —

ಒಲಿವಿಯ: ನನ್ನ ಕೇಳಿ, ದಯವಿಟ್ಟು, ಕಳೆದ ಸಲ
ನೀವು ಯಕ್ಷಿಣಿ ಮಾಡಿ ಹೋದ ಮೇಲೆ
ನಿಮ್ಮ ಹಿಂದೆಯೇ ಉಂಗುರವೊಂದನ್ನು ಕಳಿಸಿದ್ದೆ.
ಆ ರೀತಿ ನನ್ನ, ನನ್ನ ಸೇವಕನನ್ನ ಮತ್ತು ನಿಮ್ಮನ್ನ
ವಂಚಿಸಿದೆ. ನಿಮ್ಮದಲ್ಲದ್ದನ್ನ ನಾಚಿಕೆಬಿಟ್ಟು
ನಿಮಗೆ ಕಳಿಸಿದ್ದರಿಂದಾಗಿ ನನ್ನ ಬಗ್ಗೆ
ನಿಮ್ಮ ತೀರ್ಮಾನವೆಷ್ಟು ಕಠಿಣವಾಯಿತೊ ಏನೊ
ನಿಮಗೇನೆನ್ನಿಸಿತೊ! ನನ್ನ ಗೌರವವನ್ನೇ ಕಂಬಕ್ಕೆ ಕಟ್ಟಿ
ಕ್ರೂರ ಹೃದಯದ ಸರಪಳಿ ಕಳಚಿದ ಆಲೋಚನೆಗಳನ್ನ
ಅದರ ಮೇಲೆ ಛೂ ಬಿಟ್ಟಿರಬೇಕಲ್ಲವೆ?
ನಿಮ್ಮ ಸೂಕ್ಷ್ಮಗ್ರಹಿಕೆಗೆ ಅಷ್ಟು ತೋರಿಸಿದ್ದೇ ಸಾಕು,
ನನ್ನ ಹೃದಯವನ್ನು ಮರೆಮಾಡಿರುವಂಥದ್ದು
ವಕ್ಷಸ್ಥಲವಲ್ಲ, ರೇಷ್ಮೆಯ ಬಟ್ಟೆ.

ವಯೋಲ: ನಿಮ್ಮ ಬಗ್ಗೆ ನಾನು ಕನಿಕರಿಸುತ್ತೇನೆ.

ಒಲಿವಿಯ: ಅದು ಪ್ರೇಮದ ಒಂದು ಹಂತ.

ವಯೋಲ: ಅಲ್ಲವೆ ಅಲ್ಲ; ಅದು ಸಾಮಾನ್ಯ ರುಜುವಾತು,
ನಾವೆಷ್ಟೋ ವೇಳೆ ಶತ್ರುಗಳನ್ನು ಕನಿಕರಿಸುತ್ತೇವೆ.

ಒಲಿವಿಯ: ಹಾಗಾದರೆ, ಮತ್ತೆ ನಗುನಗುತ್ತಿರಲು ಇದೇ ಸಕಾಲ.
ಓ ಜಗತ್ತೇ, ಬಡವರು ಹೆಮ್ಮೆಪಡುವುದೆಷ್ಟು ಯುಕ್ತ!
ಆಹುತಿಯಾಗಲೇ ಬೇಕಾದರೆ ತೋಳಕ್ಕಿಂತ ಸಿಂಹಕ್ಕೆ
ಬಲಿಯಾಗುವುದೇ ಮೇಲಲ್ಲವೇ?

(ಗಂಟೆ ಹೊಡೆಯುತ್ತದೆ)

ಕಾಲವ್ಯಯ ಮಾಡುವೆನೆಂದು ಗಡಿಯಾರ ದೂಷಿಸುತ್ತಿದೆ.
ಭಯಬೇಡ ತರುಣ, ನಾ ನಿಮ್ಮನ್ನಿನ್ನು ಬಯಸುವುದಿಲ್ಲ.

ಆದರೂ ಅರಿವು – ಯೌವನ ಹದಗೊಂಡಾಗ
ನಿಮ್ಮ ಹೆಂಡತಿ ಯೋಗ್ಯ ಗಂಡನೆಂಬ ಫಲವನ್ನು
ಪಡೆಯುವ ಸಾಧ್ಯತೆಯಿದೆ.
ಅಗೋ ಪಶ್ಚಿಮಕ್ಕೆ ನಿಮ್ಮ ದಾರಿ.

ವಯೋಲ: ಹಾಗಾದರೆ ಪಶ್ಚಿಮದೆಡೆಗೆ ಹೊರಟೆ!
ಒಡತಿಯರು ದಯೆ–ಸಮಾಧಾನಗಳನ್ನ ತೋರಿಸಬೇಕು!
ನಮ್ಮ ಒಡೆಯರಿಗೆ ಹೇಳುವ ಮಾತೇನೂ ಇಲ್ಲವೇ?

ಒಲಿವಿಯ: ಇರಿ; ದಯೆಯಿಟ್ಟು ಹೇಳಿ:
ನನ್ನ ಬಗ್ಗೆ ನಿಮಗೇನೆನಿಸುತ್ತದೆ?

ವಯೋಲ: ನೀವು ಏನೋ ಅದಾಗಿಲ್ಲವೆಂದು ನೀವು ಭಾವಿಸಿದ್ದೀರಿ.

ಒಲಿವಿಯ: ಹಾಗಾದರೆ ನನಗೂ ನಿಮ್ಮ ಬಗ್ಗೆ ಹಾಗೇ ಅನ್ನಿಸುತ್ತದೆ.

ವಯೋಲ: ನಿಮಗೆನ್ನಿಸಿದ್ದು ಸರಿ: ನಾನು ನಾನಾಗಿಲ್ಲ.

ಒಲಿವಿಯ: ನನಗೆ ಬೇಕಾದಂತೆ ನೀವಿದ್ದಿದ್ದರೆ ಚೆನ್ನಾಗಿತ್ತು!

ವಯೋಲ: ಆಗ ನಾನು ಈಗಿಗಿಂತ ಉತ್ತಮವಾಗಿರುತ್ತಿದ್ದೇನೆ! ಹಾಗಾಗಲಿ ಎಂದು ನನ್ನ ಹಾರೈಕೆ; ಆದರೆ ಈಗ ನಾನು ನಿಮ್ಮ ನಕಲಿ.

ಒಲಿವಿಯ: (ತನ್ನಲ್ಲಿ) ಓ ಆತನ ತುಟಿಯ ಅಸಡ್ಡೆ – ಕೋಪಗಳೂ
ತಾತ್ಸಾರವನ್ನೆಷ್ಟು ಸುಂದರವನ್ನಾಗಿ ಮಾಡಿವೆ!
ಗುಟ್ಟೆಂದು ತಿಳಿದಿರುವ ಪ್ರೇಮಕ್ಕಿಂತ ಕೊಲೆಗೆಲಸವೂ
ಹೆಚ್ಚು ಬೇಗ ಪ್ರಕಟವಾಗಲಾರದು: ಪ್ರೇಮದ ರಾತ್ರಿ, ಹಗಲು
ಸಿಸೇರಿಯೋ, ಚೈತ್ರದ ಗುಲಾಬಿಯ ಮೇಲಾಣೆ,
ನನ್ನ ಕನ್ಯತ್ವ, ಮರ್ಯಾದೆ, ಸತ್ಯ ಮತ್ತೆಲ್ಲದರ ಮೇಲಾಣೆ,
ನಿಮ್ಮ ತಿರಸ್ಕಾರವನ್ನೂ ಮೀರಿ ನಾನು ನಿಮ್ಮನ್ನ ಪ್ರೇಮಿಸುತ್ತೇನೆ.
ಅರಿವು–ವಿಚಾರಗಳು ನನ್ನ ಅನುರಾಗವನ್ನ ಅಡಗಿಸಲಾರವು.
ನಾನು ಒಲಿದಿದ್ದರಿಂದ ನೀವು ತಿರಸ್ಕರಿಸಬೇಕೆಂಬ
ರೀತಿಯಲ್ಲಿ ತೀರ್ಮಾನ ಮಾಡುವುದು ಬೇಡಿ.
ಎಲ್ಲ ಅಂಶಗಳನ್ನು ಪರಿಗಣಿಸಿ ನೋಡಿ:
ಬೇಡಿ ಪಡೆದ ಪ್ರೇಮ ರಮ್ಯ, ಬೇಡದೇ ಬಂದದ್ದು ಮಿಗಿಲು.

ವಯೋಲ: ನನ್ನ ಮುಗ್ಧತೆ, ನನ್ನ ಯೌವನಗಳ ಮೇಲಾಣೆ:
ನನಗಿರುವುದು ಒಂದೇ ಹೃದಯ, ಒಂದೇ ಮನಸ್ಸು ಒಂದೇ
ಸತ್ಯ.

ಅವುಗಳಿಗೆ ನನ್ನ ಬಿಟ್ಟು ಮತ್ತಾವ ಹೆಂಗಸೂ
ಒಡೆಯಳಾಗಿಲ್ಲ; ಆಗಲಾರಳು ಕೂಡ.
ಒಳ್ಳೆಯದು, ದೇವಿ, ನಮಸ್ಕಾರ! ಮತ್ತೆಂದೂ
ನನ್ನ ಒಡೆಯರ ಕಣ್ಣೀರಿಂದ ನಿಮ್ಮ ನೋಯಿಸಲಾರೆ.

ಒಲಿವೀಯ: ಆದರೂ ಮತ್ತೆ ಬನ್ನಿ: ಈಗ ದ್ವೇಷದಿಂದ ಕೂಡಿದ
ನನ್ನ ಹೃದಯವನ್ನು ಅವರ ಪ್ರೀತಿಯ ಕಡೆಗೆ
ಬದಲಿಸಬಹುದೇನೋ. (ಹೋಗುತ್ತಾಳೆ)

## ದೃಶ್ಯ ಎರಡು

ಒಲಿವಿಯಳ ಮನೆಯ ಒಂದು ಕೊಠಡಿ
(ಸರ್ ಟೋಬಿ ಬೆಲ್ಚ್, ಸರ್ ಆಂಡ್ರ್ಯೂ ಆಗ್ಯುಚೀಕ್ ಮತ್ತು ಫೇಬಿಯನ್ ಪ್ರವೇಶ)

ಸರ್ ಆಂಡ್ರ್ಯೂ: ಖಂಡಿತ ನಾನೊಂದು ಕ್ಷಣವೂ ಇನ್ನು ಇರಲಾರೆ.

ಸರ್ ಟೋಬಿ: ಏನು ಕಾರಣಾನಪ್ಪ, ನಂಜಣ್ಣ?

ಫೇಬಿಯನ್: ನೀವು ಕಾರಣಾನ ಹೇಳಲೇಬೇಕು, ಸರ್ ಆಂಡ್ರ್ಯೂ.

ಸರ್ ಆಂಡ್ರ್ಯೂ: ದೇವರೇ ಕಾಪಾಡಬೇಕು. ನಿಮ್ಮ ಸೋದರ ಸೊಸೆ ನನಗೆ ಯಾವತ್ತೂ ತೋರಿಸದಿರೋ ಆದರಾನ ಆ ಕೌಂಟ್‌ನ ಸೇವಕನಿಗೆ ತೋರಿಸ್ತಾರಲ್ಲ. ತೋಟದಲ್ಲಿ ನಾನೇ ಅದನ್ನ ನೋಡಿದೆ.

ಸರ್ ಟೋಬಿ: ನೀನು ಒಂದು ಕ್ಷಣವಾದರೂ ಅವರಿಗೆ ಕಾಣಿಸ್ತಿದ್ದೆಯೇನಪ್ಪ, ಅಣ್ಣ? ಅದನ್ನ ನಂಗೆ ಹೇಳು.

ಸರ್ ಆಂಡ್ರ್ಯೂ: ನಾನು ನಿಂಗೆ ನೋಡೋ ಹಾಗೇ ಸ್ಪಷ್ಟವಾಗಿ ಕಾಣಿಸ್ತಿದ್ದೆ.

ಫೇಬಿಯನ್: ನಿಮ್ಮ ಬಗ್ಗೆ ಅವರ ಪ್ರೇಮ ಇದೇ ಅನ್ನೋಕೆ ಇದೊಂದು ದೊಡ್ಡ ಸಾಕ್ಷಿ.

ಸರ್ ಟೋಬಿ : ದೇವರೇ ಗತಿ! ನೀವು ನನ್ನ ಕತ್ತೆಯಾಗಿ ಮಾಡ್ತಿದ್ದೀರಿ.

ಫೇಬಿಯನ್ : ನಾನದನ್ನು ಕಾನೂನು ಬದ್ಧವಾಗಿ, ವಿವೇಚನೆ - ತರ್ಕಗಳ ಆಧಾರದಿಂದ ತೋರಿಸಿಕೊಡ್ತೀನಿ, ಸ್ವಾಮಿ.

ಸರ್ ಟೋಬಿ : ನೋಹ ನಾವಿಕನಾಗೋದಕ್ಕಿಂತ ಮುಂಚಿನಿಂದ ಇವರು ಪಂಚಾಯಿತಿ ಸದಸ್ಯರಾಗಿದ್ರು.

ಫೇಬಿಯನ್ : ನಿಮಗೆ ಕಾಣಿಸೋ ಹಾಗೇನೇ ಆ ಯುವಕನ ಬಗ್ಗೆ ಆವರು ವಿಶ್ವಾಸ ತೋರಿಸಿದ್ದು ನಿಮ್ಮನ್ನ ರೇಗಿಸೋಕ್ಕೆ ನಿಮ್ಮ ಶೌರ್ಯಾನ ಎಬ್ಬಿಸೋಕೆ, ನಿಮ್ಮ ಹೃದಯದಲ್ಲಿ ಉರಿ ಹಾಕೋಕೆ, ನಿಮ್ಮ ಯಕೃತ್ತಿನಲ್ಲಿ ಗಂಧಕ ಹಾಕಿ ಪ್ರೇಮವನ್ನು ಹೆಚ್ಚು ಬೆಳೆಗೋಕೆ. ನೀವು ಅವರನ್ನಾಗಲೇ ಮಾತಾಡಿಸ್ಬೇಕಾಗಿತ್ತು ; ನಿಮ್ಮ ಟಂಕಸಾಲೆಯಿಂದ ಆಗತಾನೇ ಹೊರಬಿದ್ದಿರೋ ಕೆಲವು ಸುಂದರವಾದ ಹಾಸ್ಯದ ಮಾತುಗಳಿಂದ ಆ ಯುವಕನನ್ನ ಬೈದು ಡಂಗುಬಡಿಸಬೇಕಾಗಿತ್ತು. ಇದನ್ನೇ ಅವರು ನಿಮ್ಮಿಂದ ನಿರೀಕ್ಷಿಸಿದ್ದು. ನೀವು ಅದನ್ನು ತಪ್ಪಿಸಿದಿರಿ, ಈ ಒಳ್ಳೆ ಅವಕಾಶ ಕೊಚ್ಚಿಕೊಂಡು ಹೋಗೋ ಹಾಗೆ ಮಾಡಿಕೊಂಡಿರಿ, ನೀವು ಈಗ ನಮ್ಮ ಒಡತೀರ ಅಭಿಪ್ರಾಯದಲ್ಲಿ ಉತ್ತರಕ್ಕೆ ಹೊರಟು ಹೋಗಿದ್ದೀರಿ. ಶೌರ್ಯವೋ ಯುಕ್ತಿಯೋ ಏನಾದರೊಂದು ಒಳ್ಳೆ ಕೆಲಸದಿಂದ ಅದನ್ನು ಹೋಗಲಾಡಿಸದಿದ್ದರೆ ನೀವು ಗಡ್ಡದ ಮೇಲಿನ ಹಿಮದ ಹಾಗೆ ಕೂತಿರಬೇಕು.

ಸರ್ ಆಂಡ್ರ್ಯೂ : ಹೇಗಾದ್ರೂ ಆಗಲಿ, ಅದನ್ನ ಶೌರ್ಯದಿಂದಲೇ ಸಾಧಿಸಬೇಕು, ನಂಗೆ ಯುಕ್ತಿ ಅಂದರೆ ಆಗೋಲ್ಲ. ನಾನು ಬ್ರೌನ್‌ವಾದಿ ಮಡಿವಂತನಾದ್ರೂ ಆಗ್ತೀನಿ ಯುಕ್ತಿವಂತನಾಗಲಾರೆ.

ಸರ್ ಟೋಬಿ : ಇನ್ನೇನು ಮತ್ತೆ, ಸರಿ. ಶೌರ್ಯದ ಮೇಲೇ ನಿನ್ನ ಅದೃಷ್ಟ ಕಟ್ಟೋದಕ್ಕೆ ತೀರ್ಮಾನ ಮಾಡು. ಆ ಯುವಕನ ಜೊತೇಲಿ ಹೋರಾಡೋ ಸವಾಲು ಹಾಕೋದಕ್ಕೆ ನಂಗೆ ಹೇಳು- ಅವನನ್ನು ಹನ್ನೊಂದು ಕಡೆ ಗಾಯ ಮಾಡು. ಆಗ ನನ್ನ ಸೊಸೇ ಗಮನ ನಿನ್ನ ಮೇಲೆ ಬೀಳತ್ತೆ. ಹೆಣ್ಣಿನ ಪ್ರೀತಿ ಸಂಪಾದಿಸೋಕೆ ಶೌರ್ಯಕ್ಕಿಂತ ಒಳ್ಳೆ ಮಧ್ಯಸ್ಥಗಾರ ಯಾರೂ ಇಲ್ಲ ಅನ್ನೋದನ್ನ ತಿಳಿಕೋ.

ಫೇಬಿಯನ್ : ಇದನ್ನ ಬಿಟ್ಟರೆ ಬೇರೆ ಮಾರ್ಗವೇ ಇಲ್ಲ ಆಂಡ್ರ್ಯೂ.

ಸರ್ ಆಂಡ್ರ್ಯೂ : ನಿಮ್ಮಿಬ್ಬರಲ್ಲಿ ಯಾರಾದರೂ ಒಬ್ರು ಅವನಿಗೆ ನನ್ನ ಸವಾಲು ತಿಳಿಸ್ತೀರಾ ?

ಸರ್ ಟೋಬಿ : ಸರಿ, ಹೋಗಿ ಹೋರಾಡೋ ಕೈಲಿ ಕಾಗದ ಬರಿ ; ಒಳ್ಳೆ ಖಾರವಾಗಿರ್ಬೇಕು, ಚಿಕ್ಕದಾಗಿರ್ಬೇಕು, ಎಷ್ಟು ಚತುರ ಮಾತಿನಿಂದ ಕೂಡಿದ್ರೂ ಸರಿ. ಹಾಗೇನೇ ಕಾಗದ ಅಲಂಕಾರದಿಂದ ಕೂಡಿರಬೇಕು, ಹೊಸತನದಿಂದ ಇರಬೇಕು. ಶಾಯಿಯ ಸ್ವಾತಂತ್ರ್ಯವನ್ನೆಲ್ಲ ಬಳಸಿಕೊಂಡು ಅವನನ್ನು ಛೇಡಿಸು. ಅವನನ್ನ ಮೂರು ಬಾರಿ 'ಏನೋ' ಅಂದರೂ ತಪ್ಪಿಲ್ಲ. ನೀನು ಬರೆಯೋ ಕಾಗದ ಮನೆ ಅಷ್ಟು ಅಗಲವಾಗಿದ್ರೂ ಅದರಲ್ಲಿ ಎಷ್ಟು ಸುಳ್ಳುಗಳು ಕಾಲು ಚಾಚಿದ್ರೂ ಪರವಾಗಿಲ್ಲ – ಸರಿ, ಹೊರಡು. ಹಿಡಿಯೋದು ಬಾತುಪುಕ್ಕದ ಲೇಖನಿಯಾದ್ರೂ ಮಸಿಯಲ್ಲಿ ಖಾರ ತುಂಬಿರಬೇಕು. ಹ್ಞೂ ಹೊರಡು.

ಸರ್ ಆಂಡ್ರ್ಯೂ : ನೀನೆಲ್ಲಿ ನಂಗೆ ಸಿಕ್ತೀ ?

ಸರ್ ಟೋಬಿ : ನಿನ್ನ ಕೋಣೇಲೇ ಬಂದು ಕಾಣ್ತೇವಿ, ಹೊರಡು.

(ಸರ್ ಆಂಡ್ರ್ಯೂ ಹೋಗುತ್ತಾನೆ)

ಫೇಬಿಯನ್ : ಇವರು ನಿನ್ನ ಅಮೂಲ್ಯವಾದ ಬೊಂಬೆ, ಅಲ್ಲವಾ ಸರ್ ಟೋಬಿ ?

ಸರ್ ಟೋಬಿ : ನಾನವನಿಗೆ ತುಂಬ ಅಮೂಲ್ಯ ಎರಡು ಸಾವಿರ ವರಹದಷ್ಟು.

ಫೇಬಿಯನ್ : ಅವರಿಂದ ಒಂದು ಅಪೂರ್ವವಾದ ಕಾಗದ ಬರುತ್ತೆ, ನೀನದನ್ನು ತಲುಪಿಸೋದಿಲ್ಲ ತಾನೇ ?

ಸರ್ ಟೋಬಿ : ಹಾಗೆ ಮಾಡಿದರೆ ನನ್ನ ನಂಬಲೇಬೇಡ ; ಎಲ್ಲ ರೀತಿಯಿಂದ ಆ ಯುವಕ ಉತ್ತರಿಸೋ ಹಾಗೆ ಕಲಕ್ತೀನಿ. ಎತ್ತು–ಹಗ್ಗಗಳು ಕೂಡ ಅವನನ್ನ ಎಳೀಲಾರವು ಅಂದ್ಕೊಂಡಿದ್ದೀನಿ. ಇನ್ನು ಆಂಡ್ರ್ಯೂ ವಿಚಾರ : ಅವನ ದೇಹ ಸೀಳಿದಾಗ ಯಕೃತ್ತಿನಲ್ಲಿ ಒಂದು ಚಿಗಟದ ಕಾಲು ನೆನೆಯೋ ಅಷ್ಟು ರಕ್ತ ಕಂಡರೆ, ದೇಹದ ಮಿಕ್ಕ ಭಾಗಾನೆಲ್ಲ ನಾನೇ ತಿಂತೀನಿ.

ಫೇಬಿಯನ್ : ಇವನ ವಿರೋಧಿ ಆ ಯುವಕ ಕೂಡ ಅಂಥ ಕ್ರೂರಿ ಕಂಡ ಹಾಗೆ ಕಾಣಲ್ಲ.

(ನಗು ತಡೆಯಲಾರದೆ ಪಕ್ಕಗಳನ್ನು ಹಿಡಿದುಕೊಂಡು ಮರೀಯ ಬರುತ್ತಾಳೆ).

ಸರ್ ಟೋಬಿ : ನೋಡು ನನ್ನ ಪುಟಾಣಿ ಗುಬ್ಬಚ್ಚಿಮರಿ ಬಂದಳು.

ಮರೀಯ: ನಿಮಗೆ ಪಕ್ಕೆ ನೋವಾಗೋ ಹಾಗೆ ನಗಬೇಕೂಂತ ಇದ್ರೆ ನನ್ನ ಜೊತೆ ಬನ್ನಿ. ಆ ಬೆಳ್ಳಕ್ಕಿ ಮಾಲ್ವೋಲಿಯೋ ಕುಲಗೆಟ್ಟಿದ್ದಾನೆ, ಕಾಫಿರನಾಗಿ ಬಿಟ್ಟಿದ್ದಾನೆ. ಧರ್ಮದ ಸರಿಯಾದ ನಂಬಿಕೆ ನಮ್ಮನ್ನ ಕಾಪಾಡುತ್ತೆ ಅಂತ ನಂಬೋ ಯಾರೂ ಕಾಗದದಲ್ಲಿರೋ ಆ ಅಸಾಧ್ಯ ವಿಷಯಾನ ನಂಬೋದಿಲ್ಲ. (ನಗು ತಡೆಯಲಾರದೆ) ಅವನು ಹಳದಿ ಕಾಲುಚೀಲ ಹಾಕ್ಕೊಂಡು ಬಂದಿದ್ದಾನೆ.

ಸರ್ ಟೋಬಿ : (ಕೂಗಿ) ಗಾರ್ಟರ್ ಅಡ್ಡಪಟ್ಟೇನೂ ಹಾಕ್ಕೊಂಡಿದಾನಾ ?

ಮರೀಯ: ಖಳನಾಯಕ ಇದ್ದ ಹಾಗಿದಾನೆ. ಕೂಲಿ ಮಠದ ಓಚಯ್ಯನ ಥರ ಇದ್ದಾನೆ. ಅವನ ಕೊಲೆ ಮಾಡೋಳ ಹಾಗೆ ಅವನ ಹಿಂದೇನೇ ಹೋದೆ. ನಾನು ಬೀಳಿಸಿದ್ದ ಕಾಗದದಲ್ಲಿರೋ ಪ್ರತಿ ಸಾಲನ್ನೂ ಚಾಚೂ ತಪ್ಪದೆ ಅನುಸರಿಸ್ತಿದಾನೆ. ಅವನು ನಗ್ತಾ ಇದ್ದರೆ ಇಂಡಿಯ ಸೇರಿದ ಹೊಸ ಭೂಪಟದ ಮೇಲಿರೋ ಗೆರೆಗಳೆಲ್ಲ ಅವನ ಮುಖದ ಮೇಲೆ ಮೂಡ್ತವೆ. ಅಂಥದ್ದನ್ನ ನೀವು ಕಂಡೇ ಇಲ್ಲ. ನಂಗಂತೂ ಕೈಗೆ ಸಿಕ್ಕಿದ್ದನ್ನೆಲ್ಲ ಅವನ ಮೇಲೆ ಎಸೀಬೇಕೂಂತ ಅನ್ನತ್ತೆ. ಒಡತಿ ಅಂತೂ ಅವನ್ನ ಖಂಡಿತ ಹೊಡದೇ ಬಿಡ್ತಾರೆ. ಅವರು ಹೊಡೆದ್ರೂ ಅದನ್ನ ಕೃಪೆ ಅಂತ ತಿಳ್ಕೊಂಡು ಇವನು ಇನ್ನಷ್ಟು ನಗ್ತಾ ಇರ್ತಾನೆ.

ಸರ್ ಟೋಬಿ : ಬಾ ಬಾ, ಅವನೆಲ್ಲಿದ್ದಾನೋ ಹೋಗಿ ನೋಡೋಣ.

(ಅವಸರದಿಂದ ಹೋಗುತ್ತಾರೆ)

## ದೃಶ್ಯ ಮೂರು

ಒಂದು ಬೀದಿ

(ಆಂಟೋನಿಯೋ ಮತ್ತು ಸೆಬಾಸ್ಟಿಯನ್ ಬರುತ್ತಾರೆ)

ಸೆಬಾಸ್ಟಿಯನ್ : ನಾನು ಬೇಕೆಂದು ತೊಂದರೆ ಕೊಡಲಿಲ್ಲ,
ಆದರೆ ನೀವು ನೋವನ್ನೇ ನಲಿವೆಂದು ತಿಳಿಯುವುದರಿಂದ

ನಾನಿನ್ನು ನಿಮ್ಮ ಮುಂಚಾಲು ಬೀಳುವುದಿಲ್ಲ.

ಆಂಟೋನಿಯೊ : ನಾನು ನಿಮ್ಮನ್ನು ಬಿಟ್ಟಿರಲಾಗಲಿಲ್ಲ: ನನ್ನಾಸೆ
ಸಾಣೆಹಿಡಿದ ಅಂಕುಶಕ್ಕಿಂತ ಹರಿತವಾಗಿ ಚುಚ್ಚಿ
ಮುಂದೆ ನೂಕಿದೆ ನನ್ನ. ನನ್ನಲ್ಲಿದ್ದದ್ದು ನಿಮ್ಮನ್ನು
ನೋಡುವ ಆಸೆ ಮಾತ್ರವೇ ಅಲ್ಲ, ಈ ಕಡೆಯ
ಪರಿಚಯವಿರದ ನಿಮಗೇನು ಸಂಭವಿಸುವುದೋ
ಎಂಬ ಕಾತರವಿತ್ತು. ಮಾರ್ಗದರ್ಶನ – ಸ್ನೇಹಿತರು
ಇಲ್ಲದಿದ್ದರೆ ಈ ಭಾಗ ಅಪರಿಚಿತನಿಗೆ
ಕಷ್ಟಕರವೂ ಆತಿಥ್ಯವಿಹೀನವೂ ಆಗುವಂಥದು.
ಬರಲು ದೂಡಿದ್ದ ನನ್ನ ಪ್ರೀತಿ, ಈ ಭಯದ ಕಾರಣದಿಂದ,
ನಿಮ್ಮನ್ನು ಹಿಂಬಾಲಿಸುವಂತಾಯಿತು.

ಸೆಬಾಸ್ಟಿಯನ್ : ಪ್ರಿಯ ಆಂಟೋನಿಯೋ, ನಾನು ನಿಮಗೆ ಋಣಿ,
ಚಿರಋಣಿ ಎಂಬಷ್ಟು ಬಿಟ್ಟು ಮತ್ತಾವ ಮಾತನ್ನೂ
ನಾನಾಡಲಾರೆ. ಕೆಲವೊಮ್ಮೆ ಒಳ್ಳೆಯ ಕೆಲಸಗಳನ್ನು
ಇಂಥ ಖೋಟಾ ಪ್ರತಿಫಲದಿಂದ ಕೊನೆಗಾಣಿಸುವರು.
ಆದರೆ ನನ್ನ ಪ್ರಜ್ಞೆಯಷ್ಟು ನನ್ನ ಯೋಗ್ಯತೆಯಿದ್ದಿದ್ದರೆ
ನಮ್ಮ ಸಂಬಂಧ ಇನ್ನೂ ಉತ್ತಮವೆನಿಸುತ್ತಿತ್ತು.
ಏನು ಮಾಡುವುದು; ಈ ಊರಿನ ಪ್ರಾಚೀನ
ಅವಶೇಷಗಳನ್ನು ಹೋಗಿ ನೋಡೋಣವೇ ?

ಆಂಟೋನಿಯೊ : ಸ್ವಾಮಿ, ಅದು ನಾಳೆ. ಮೊದಲು ನಿಮ್ಮ ವಸತಿಯ ಪ್ರಶ್ನೆ.

ಸೆಬಾಸ್ಟಿಯನ್ : ನಾನು ಸುಸ್ತಾಗಿಲ್ಲ. ಹೊತ್ತು ಕೂಡ ಬೇಕಾದಷ್ಟಿದೆ.
ದಯವಿಟ್ಟು, ಈ ನಗರಕ್ಕೆ ಕೀರ್ತಿ ತಂದಿರುವ
ಸ್ಮಾರಕಗಳನ್ನು ಕಂಡು ಕಣ್ಣು ತೃಪ್ತಿಗೊಳ್ಳಲಿ.

ಆಂಟೋನಿಯೊ : ದಯವಿಟ್ಟು ಕ್ಷಮಿಸಿ ನನ್ನ; ಈ ಬೀದಿಗಳಲ್ಲಿ
ನಡೆಯುವುದು ತುಂಬ ಅಪಾಯಕರ ನನಗೆ.
ಕೌಂಟ್‌ನ ಹುಟ್ಟುನಾವೆಗಳ ವಿರುದ್ಧ ಹೋರಾಡಿ
ಒಮ್ಮೆ ನಾನೂ ಸೇವೆ ಸಲ್ಲಿಸಿದ್ದೇನೆ. ಅದೆಷ್ಟು

ಗಮನಾರ್ಹವೆಂದರೆ, ನನ್ನನ್ನಿಲ್ಲಿ ಸೆರೆಹಿಡಿದಿದ್ದರೆ
ನಾನದನ್ನು ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಸೆಬಾಸ್ಟಿಯನ್ : ನೀವು ಅವರ ಕಡೆಯ ಬಹಳ ಜನರನ್ನು ಕೊಂದಿರಬೇಕು.

ಆಂಟೋನಿಯೊ : ಕಾಲ ಮತ್ತು ಕಾದಾಟದ ರೀತಿಯಲ್ಲಿ ಸಾಕಷ್ಟು
ರಕ್ತಪಾತದ ಕದನಕ್ಕೆ ಅವಕಾಶವಿತ್ತಾದರೂ
ಹೋರಾಟ ಅಷ್ಟೊಂದು ಭೀಕರವಾಗಲಿಲ್ಲ.
ನಾವವರಿಂದ ಪಡೆದದ್ದಕ್ಕೆ ಪ್ರತಿಯಾಗಿ ಇಷ್ಟು
ಹೊತ್ತಿಗೆ ನಮ್ಮವರು ಉತ್ತರಿಸಿಯೂ ಇರಬಹುದು,
ವ್ಯಾಪಾರದ ಸಲುವಾಗಿ ನಮ್ಮ ನಗರವೇ ಅದನ್ನ ಮಾಡಿತು.
ನಾನೊಬ್ಬನೇ ಹೊರಗುಳಿದೆ : ಅದಕ್ಕಾಗಿ
ನಾನಿಲ್ಲಿ ಸೆರೆಸಿಕ್ಕಿದರೆ ತೆರಬೇಕಾದ ಬೆಲೆ ದುಬಾರಿ.

ಸೆಬಾಸ್ಟಿಯನ್ : ಹಾಗಾದರೆ ತೀರ ಪ್ರಕಟವಾಗಿ ಓಡಾಡಬೇಡಿ.

ಆಂಟೋನಿಯೊ : ನನಗದು ಸರಿಯಲ್ಲ. ಇಗೋ ನನ್ನ ಹಣದ ಚೀಲ. (ಕೊಡುವನು)
ದಕ್ಷಿಣದ ಬಡಾವಣೆಗಳಲ್ಲಿ 'ಎಲಿಫೆಂಟ್' ವಾಸಿಸಲು ಉತ್ತಮ
ವಸತಿ. ನಮ್ಮ ಊಟಕ್ಕೆ ನಾನು ಏರ್ಪಾಡು ಮಾಡುತ್ತೇನೆ.
ನೀವು ಕಾಲಕಳೆಯಲು ನಗರದಲ್ಲಿ ಸುತ್ತಾಡಿ,
ನಿಮ್ಮ ಜ್ಞಾನಕ್ಕೂ ಆಹಾರ ನೀಡಿ. ಆಮೇಲೆ ಬನ್ನಿ.

ಸೆಬಾಸ್ಟಿಯನ್ : ನಿಮ್ಮ ಹಣ ನನ್ನ ಬಳಿ ಏಕೆ ?

ಆಂಟೋನಿಯೊ : ಚಿಕ್ಕ ಪುಟ್ಟ ಸಾಮಾನುಗಳು ಕಣ್ಣಿಗೆ ಬಿದ್ದಾಗ
ಕೊಳ್ಳುವುದಕ್ಕೆ ; ನಿಮ್ಮ ಬಳಿಯಿರುವ ಹಣ
ಇಂಥ ವ್ಯಾಪಾರಕ್ಕೆ ಸಾಲದೇ ಹೋಗಬಹುದು.

ಸೆಬಾಸ್ಟಿಯನ್ : ನಿಮ್ಮ ಹಣದ ಚೀಲವನ್ನು ಹೊರುವವನಾಗಿ
ಒಂದು ಗಂಟೆಯ ಕಾಲ ಸುತ್ತಾಡಿ ಬರುತ್ತೇನೆ.

ಆಂಟೋನಿಯೊ : 'ಎಲಿಫೆಂಟ್'ಗೆ ಬನ್ನಿ.

ಸೆಬಾಸ್ಟಿಯನ್ : ನನಗೆ ನೆನಪಿದೆ.

(ಬೇರೆ ಬೇರೆ ದಿಕ್ಕಿನಲ್ಲಿ ಹೋಗುತ್ತಾರೆ)

# ದೃಶ್ಯ ನಾಲ್ಕು

ಒಲಿವಿಯಳ ಉದ್ಯಾನ

(ಯೋಚಿಸುತ್ತ ಒಲಿವಿಯ ಬರುತ್ತಾಳೆ, ಹಿಂದೆ ಮರೀಯ, ಒಲಿವಿಯ ಕುಳಿತುಕೊಳ್ಳುತ್ತಾಳೆ)

ಒಲಿವಿಯ : (ತನ್ನಲ್ಲಿ) ನಾನವರಿಗೆ ಹೇಳಿಕಳಿಸಿದ್ದೇನೆ; ಅವರೂ ಬರಲು ಒಪ್ಪಿದ್ದಾರೆ.
ಅವರ ಕಣ್ತಣಿಯುವುದು ಹೇಗೆ? ಅವರಿಗೇನನ್ನು ನೀಡಲಿ?
ಏಕೆಂದರೆ ಯೌವನವನ್ನು ಬೇಡಿಯಾಗಲೀ ಎರವಲಾಗಲೀ
ಪಡೆಯುವುದಕ್ಕಿಂತ ಬೆಲೆಗೆ ಕೊಳ್ಳುವುದೆ ಹೆಚ್ಚು.
ತೀರ ಜೋರಾಗಿ ಮಾತಾಡಿಕೊಳ್ಳುತ್ತಿದ್ದೇನೆ ನಾನು.
(ಮರೀಯಳಿಗೆ) ಮಾಲ್ವೋಲಿಯೊ ಎಲ್ಲಿ? ಅವರೀಗ
ಖಿನ್ನರಾಗಿದ್ದಾರೆ, ನಯವಂತರಾಗಿದ್ದಾರೆ.
ನನ್ನಂಥ ಅದೃಷ್ಟದವಳಿಗೆ ನೌಕರರಾಗಲು
ಅವರೀಗ ತಕ್ಕವರು. ಎಲ್ಲಿ ಮಾಲ್ವೋಲಿಯೋ?

ಮರೀಯ : ಬರುತ್ತಿದ್ದಾರೆ, ಒಡತಿ. ಅವರ ನಡೆ ವಿಚಿತ್ರವಾಗಿದೆಯಲ್ಲ! ಖಂಡಿತ ಅವರನ್ನಾವುದೋ ಪಿಶಾಚಿಯಾವರಿಸಿರಬೇಕು.

ಒಲಿವಿಯ : ಏಕೆ? ಏನು ವಿಷಯ? ಹುಚ್ಚುಹುಚ್ಚಾಗಿ ಆಡುತ್ತಾರೇನು?

ಮರೀಯ : ಇಲ್ಲ, ಒಡತಿ. ಅವರು ಒಂದೇ ಸಮ ನಗುತ್ತಿರ್ತಾರೆ. ತಮ್ಮ ಹತ್ತಿರ ಯಾರಾದ್ರೂ ರಕ್ಷಣೆಗಿರೋದು ಒಳ್ಳೇದು, ಅವರಿಗೆ ಬುದ್ಧಿ ಕೆಟ್ಟಿರೋದು ಖಂಡಿತ.

ಒಲಿವಿಯ : ಹೋಗಿ, ಅವರನ್ನ ಕರೆದುಕೊಂಡು ಬಾ ಇಲ್ಲಿ.
(ಮಲ್ವೋಲಿಯೋ ಹಳದಿ ಕಾಲುಚೀಲವನ್ನು ಧರಿಸಿ, ವಿಚಿತ್ರ ನಡಿಗೆಯಿಂದ ಬರುತ್ತಿರುವುದು ಕಾಣುತ್ತದೆ)

ದುಃಖದ ಆನಂದದ ಹುಚ್ಚುಗಳೆರಡೂ ಸಮನಾದರೆ
ನಾನೂ ಅವರಷ್ಟೇ ಹುಚ್ಚಿಯಾಗಿದ್ದೇನೆ,
ಏನು ಸಮಾಚಾರ, ಮಾಲ್ವೋಲಿಯೋ?

ಮಾಲ್ವೋಲಿಯೊ : ಮಧುರ ದೇವಿ ಹೊ ಹ್ಹೋ.

ಒಲಿವಿಯ: ನಗುತ್ತೀರಾ ನೀವು? ಗಂಭೀರ ಸನ್ನಿವೇಶದಲ್ಲಿ ನಿಮ್ಮನ್ನ ಕರೆಸಿದ್ದೇನೆ.

ಮಾಲ್ವೋಲಿಯೊ: ಗಂಭೀರವೇ ಒಡತಿ ? ನಾನು ಗಂಭೀರವಾಗಿರಬಲ್ಲೆ; ಇದು. ಈ ಗಾರ್ಟರ್ ಅಡ್ಡಪಟ್ಟಿ ರಕ್ತಚಲನೆಗೆ ಸ್ವಲ್ಪ ಅಡ್ಡಿ ಮಾಡುತ್ತಿದೆ — ಆದರೇನು ಮಹಾ, ಅದು ಒಬ್ಬರ ಕಣ್ಣಿಗೆ ಚೆನ್ನಾಗಿರುವುದೆಂದರೆ? ನನ್ನ ವಿಷಯದಲ್ಲಿ "ಒಬ್ಬಳ ಸಂತಸಗೊಳಿಸಿ ಸಂತಸಗೊಳಿಸೆಲ್ಲರನು" ಅನ್ನೋ ಪದ್ಯ ತುಂಬ ನಿಜ.

ಒಲಿವಿಯ: ಹೀಗೇಕಿದ್ದೀರಪ್ಪ? ಏನು ನಿಮ್ಮ ಸಮಾಚಾರ?

ಮಾಲ್ವೋಲಿಯೋ: ಕಾಲಲ್ಲಿ ಹಳದಿ ಇದ್ದರೂ ತಲೇಲಿ ಕಪ್ಪಿಲ್ಲ. ಅದು ಅವನ ಕೈಗೆ ಬಂತು, ಅಪ್ಪಣೆಯನ್ನ ಪಾಲಿಸಲೇಬೇಕು. ಸುಂದರವಾದ ರೋಮನ್ ಶೈಲಿ ಬರವಣಿಗೆ ನನಗೆ ಗೊತ್ತಿದೇಂತ ನನ್ನ ಭಾವನೆ.

ಒಲಿವಿಯ: ಹೋಗಿ ಮಲಗುತ್ತೀರಾ, ಮಾಲ್ವೋಲಿಯೋ?

ಮಾಲ್ವೋಲಿಯೊ: ಮಲಗುವುದೇ? ಹೌದು ಪ್ರಿಯೆ, ನಾನು ನಿಮ್ಮೆಡೆಗೆ ಬರುತ್ತೇನೆ.

ಒಲಿವಿಯ: ದೇವರು ನಿಮಗೆ ಸರಿಯಾದ ಬುದ್ಧಿಕೊಡಲಿ ? ಹಾಗೇಕೆ ನಗುತ್ತಿದ್ದೀರಿ? ನಿಮ್ಮ ಕೈಯನ್ನೇ ಮುದ್ದಿಸುತ್ತಿದ್ದೀರಲ್ಲ?

ಮರೀಯ: ಈಗ ಹೇಗಿದೆ ಮಾಲ್ವೋಲಿಯೋ?

ಮಾಲ್ವೋಲಿಯೊ: (ತಿರಸ್ಕಾರದಿಂದ) ನಿಂಗೆ ಉತ್ತರಕೊಡೋದ ? ಕೋಗಿಲೆ ಕಾಗೇಗೆ ಉತ್ತರಕೊಡತ್ತೆ!

ಮರೀಯ: ಒಡತೀರ ಮುಂದೆ ಈ ರೀತಿ ವಿಚಿತ್ರ ಧೈರ್ಯದಿಂದ ಮಾತಾಡ್ತಾ ಇದ್ದೀರಿ?

ಮಾಲ್ವೋಲಿಯೊ: (ಒಲಿವಿಯಳಿಗೆ) "ಮಟ್ಟಕ್ಕೆ ಹೆದರಬೇಡ" ಚೆನ್ನಾಗಿ ಬರೆದಿದೆ.

ಒಲಿವಿಯ: ಏನು ಇದರ ಅರ್ಥ, ಮಾಲ್ವೋಲಿಯೋ?

ಮಾಲ್ವೋಲಿಯೊ: "ಕೆಲವರು ಹಿರಿಯರಾಗಿ ಹುಟ್ಟುತ್ತಾರೆ."

ಒಲಿವಿಯ: ಆ್ಞ?

ಮಾಲ್ವೋಲಿಯೊ: "ಕೆಲವರು ಹಿರಿತನವನ್ನು ಸಾಧಿಸುತ್ತಾರೆ."

ಒಲಿವಿಯ: ಇದನ್ನೇಕೆ ಹೇಳುತ್ತಿದ್ದೀರಿ?

ಮಾಲ್ವೋಲಿಯೊ: "ಮತ್ತೆ ಕೆಲವರ ಮೇಲೆ ಹಿರಿತನವೇ ಬಂದೆರಗುತ್ತದೆ."

ಒಲಿವಿಯ: ದೇವರು ನಿಮ್ಮ ಬುದ್ಧಿ ಸರಿಮಾಡಲಿ.

ಮಾಲ್ವೋಲಿಯೊ: "ನೆನಪಿಸಿಕೋ: ನಿನ್ನ ಹಳದಿ ಕಾಲುಚೀಲಗಳನ್ನು ಮೆಚ್ಚಿಕೊಂಡವರು ಯಾರು?"

ಒಲಿವಿಯ: ಹಳದಿ ಕಾಲುಚೀಲ!

ಮಾಲ್ವೋಲಿಯೊ: "ನೀನು ಗಾರ್ಟರ್ ಅಡ್ಡಪಟ್ಟಿ ಹಾಕಿರುವುದನ್ನು ಕಾಣಲು ಇಷ್ಟಪಡುವವರಾರು?"

ಒಲಿವಿಯ: ಗಾರ್ಟರ್ ಅಡ್ಡಪಟ್ಟಿ!

ಮಾಲ್ವೋಲಿಯೊ: "ನಿನ್ನ ಭವಿಷ್ಯ ಉಜ್ವಲವಾಗಿದೆ, ಅದನ್ನ ಬಯಸೋದಾದರೆ ಹೊರಡು."

ಒಲಿವಿಯ: ನನ್ನ ಭವಿಷ್ಯವೇ!

ಮಾಲ್ವೋಲಿಯೊ: "ಇಲ್ಲದಿದ್ದರೆ ನೀನು ಸೇವಕನಾಗಿಯೇ ಉಳಿಯುತ್ತೀಯೆ."

ಒಲಿವಿಯ: ಅಯ್ಯೋ, ಇದು ಮಧ್ಯ ಬೇಸಗೆ ಹುಚ್ಚು.
(ಮನೆಯಿಂದ ಸೇವಕನೊಬ್ಬನು ಬರುತ್ತಾನೆ)

ಸೇವಕ: ತಾಯಿ, ಕೌಂಟ್ ಆರ್ಸಿನೋ ಆಸ್ಥಾನದ ಆ ಚಿಕ್ಕ ರಾಯರು ವಾಪಸ್ಸು ಬಂದಿದಾರೆ - ಅವರ್ನ ವಾಪಸ್ಸು ಬರೋ ಹಾಗೆ ಮಾಡೋದು ತುಂಬ ಕಷ್ಟ ಆಯ್ತು. ನಿಮ್ಮ ಅಪ್ಪಣೆಗಾಗಿ ಕಾಯ್ತಾ ಇದ್ದಾರೆ.

ಒಲಿವಿಯ: ನಾನವರನ್ನ ಬಂದು ಕಾಣ್ತೇನೆ. (ಸೇವಕ ಹೋಗುತ್ತಾನೆ)

ಮರೀಯ, ಈ ನಮ್ಮ ಸಂಗಡಿಗರನ್ನ ವಿಚಾರಿಸಿಕೊಳ್ಳಬೇಕು. ಮಾವ ಟೋಬಿ ಎಲ್ಲಿ? ನಮ್ಮ ಕಡೆ ಕೆಲವರು ಇವರ ಬಗ್ಗೆ ವಿಶೇಷ ಎಚ್ಚರ ವಹಿಸಿ ನೋಡಿಕೊಳ್ಳಲಿ, ನನ್ನ ಅರ್ಧ ಆಸ್ತಿ ಹೋದರೆ ಆಗೋದಕ್ಕಿಂತ ಇವರಿಗೆ ತೊಂದರೆ ಆದರೆ ನನಗೆ ಹೆಚ್ಚು ದುಃಖ.
(ಅವಳು ಮನೆಯೊಳಗೆ ಹೋಗುತ್ತಾಳೆ ; ಮರೀಯ ಹಿಂಬಾಲಿಸುತ್ತಾಳೆ).

ಮಾಲ್ವೋಲಿಯೊ: ಓಹೋ! ಈಗ ತಿಳೀತಾ ನಾನು ಯಾರೂಂತ? ಸರ್ ಟೋಬಿಗಿಂತ ಕಡಿಮೆ ಮನುಷ್ಯ ನನ್ನ ನೋಡ್ಕೊಳ್ಳೋ ಹಾಗಿಲ್ಲ. ಇದಕ್ಕೂ

ಕಾಗದದಲ್ಲಿ ಬರೆದದ್ದಕ್ಕೂ ಸರಿ ಹೋಗುತ್ತೆ. ಅವರು ಇವನನ್ನ ನನ್ನ ಹತ್ತಿರ ಕಳಿಸ್ತಾ ಇರೋದು ಉದ್ದೇಶಪೂರ್ವಕವಾಗಿಯೇ, ನಾನವನ ಹತ್ತಿರ ಜಬರ್ದಸ್ತು ತೋರಿಸಲಿ ಅಂತ. ಅದನ್ನೇ ಅಲ್ಲವೇ ಅವರು ಕಾಗದದಲ್ಲಿ ಬರೆದದ್ದು : ''ನಿನ್ನ ದೈನ್ಯದ ಪೊರೆಯನ್ನ ಕಳಚಿ ಹಾಕಿ ಹೊಸತಾಗಿ ಕಾಣು. ಸಂಬಂಧಿಕನೊಬ್ಬನನ್ನು ವಿರೋಧಿಸು. ನಿನ್ನ ನಾಲಗೆ ಮೇಲೆ ರಾಜನೀತಿ ವಿಷಯಗಳೇ ತುಂಬಿರಲಿ. ವಿಶಿಷ್ಟವಾಗಿ ಕಾಣುವಂತಹ ನಡವಳಿಕೆಯನ್ನು ಅಭ್ಯಾಸ ಮಾಡಿಕೊ'' ಅಂತಲ್ಲವೇ? ಆಮೇಲೆ ಹೇಗಿರಬೇಕು ಅಂತ ಕೂಡ ಸೂಚಿಸಿದ್ದಾರೆ. ಗಂಭೀರವಾದ ಮುಖ, ಗೌರವ ಬರೋ ಅಂಥ ನಿಲುವು, ನಿಧಾನವಾದ ಮಾತು, ಎಲ್ಲ ಗಣ್ಯ ವ್ಯಕ್ತಿ ಹಾಗೆ ಇತ್ಯಾದಿ. ನಾನವರನ್ನ ಸೆರೆ ಹಿಡಿದುಬಿಟ್ಟದ್ದೀನಿ. ಆದರೆ ಅದು ದೇವರ ಕೃಪೆಯಿಂದಾದದ್ದು, ಆದ್ದರಿಂದ ದೇವರ ಬಗ್ಗೆ ನಾನು ಕೃತಜ್ಞನಾಗಿರೋ ಹಾಗಾಗಲಿ ! ಇಲ್ಲಿಂದ ಹೋಗೋವಾಗ ಅವರಂದದ್ದು ! ''ಈ ನಮ್ಮ ಸಂಗಡಿಗನನ್ನು ವಿಚಾರಿಸಿಕೊಳ್ಳಬೇಕು''. ''ಸಂಗಡಿಗ'' ! ಮಾಲ್ವೋಲಿಯೋ ಅಂತಾನೂ ಕರಿಯಲಿಲ್ಲ, ಪಾರುಪತ್ತೇದಾರ ಅಂತಾನೂ ಹೇಳಲಿಲ್ಲ, ''ಸಂಗಡಿಗ'' ಅಂದರು ! ಹೌದು, ಎಲ್ಲ ಹೊಂದಿಕೊಳ್ಳತ್ತೆ. ಒಂದು ತೊಲದಷ್ಟೂ, ತೊಲದಲ್ಲಿನ ಒಂದು ಗುಂಜಿಯಷ್ಟೂ ಕಡಿಮೆ ಇಲ್ಲ. ನಂಬಲಾಗದ್ದು ಅಥವಾ ಅಪಾಯ ಅನ್ನೋಂಥದ್ದು ಸ್ವಲ್ಪವೂ ಇಲ್ಲ. ಇನ್ನೇನು ಹೇಳೋದು ? ನನಗೂ ನನ್ನ ಆಸೆಗಳು ನೆರವೇರೋದಕ್ಕೂ ಮಧ್ಯೆ ಯಾವುದೂ ಅಡ್ಡಿಯಾಗಲಾರದು. ಹೌದು, ನಾನಲ್ಲ, ದೇವರು ಈ ಕೆಲಸ ಆಗಮಾಡಿಸಿದ್ದು. ಅವನಿಗೆ ನಮಸ್ಕಾರ ಅನ್ನಬೇಕು.

(ಮರೀಯ ಸರ್ ಟೋಬಿ ಬೆಲ್ಚ್ ಹಾಗೂ ಫೇಬಿಯನ್‌ರ ಜೊತೆ ವಾಪಸ್ಸು ಬರುತ್ತಾಳೆ)

ಸರ್ ಟೋಬಿ : ಶಾಂತಂ ಪಾಪಂ, ಅವನೆಲ್ಲಿದ್ದಾನೆ ? ನರಕದ ಎಲ್ಲ ದೆವ್ವಗಳೂ ಅವನನ್ನ ಸೂಕ್ಷ್ಮರೂಪದಲ್ಲಿ ಆವರಿಸಿದ್ದರೂ, ಪಿಶಾಚಪತಿಯೇ ಹಿಡಿದಿದ್ದರೂ, ನಾನವನನ್ನ ಮಾತಾಡಿಸ್ತೇನೆ.

ಫೇಬಿಯನ್ : ಇಲ್ಲಿದ್ದಾನೆ ಅವನು, ಇಲ್ಲಿದ್ದಾನ, ಹೇಗಿದ್ದೀರಿ ಸ್ವಾಮಿ ?

ಸರ್ ಟೋಬಿ : ಹೇಗಿದ್ದೀಯಪ್ಪ, ಅಯ್ಯ ?

ಮಾಲ್ವೋಲಿಯೊ: ತೊಲಗಾಚೆ. ನಾನು ನಿನ್ನನ್ನ ತಿರಸ್ಕರಿಸ್ತೇನೆ. ನಾನು ಏಕಾಂತವಾಗಿದ್ದೇನೆ. ಹೊರಟುಹೋಗು.

ಮರೀಯ: ಓ, ಅವನೊಳಗಿರೋ ಪಿಶಾಚಿ ಎಷ್ಟು ಪೊಳ್ಳಾಗಿ ಮಾತಾಡತ್ತೆ! ನಾನು ನಿಮಗೆ ಹೇಳಲಿಲ್ಲವೇ ? ಸರ್ ಟೋಬಿ, ಅವರ ಬಗ್ಗೆ ಎಚ್ಚರವಹಿಸಬೇಕೂಂತ ಒಡತಿ ನಿಮಗೆ ಹೇಳಿದಾರೆ.

ಮಾಲ್ವೋಲಿಯೊ: ಆಹ್ಹಾ.... ಹೌದೇನು ?

ಫೇಬಿಯನ್: ನಿಧಾನ, ನಿಧಾನ. ಅವನ ಜೊತೇಲಿ ನಾವು ನಯವಾಗಿ ನಡಕೋಬೇಕು ನಾನೊಬ್ಬನೇ ಇರ್ತೀನಿ. ಹೇಗಿದ್ದೀ ಮಾಲ್ವೋಲಿಯೋ ? ಇದೇನು ಗತಿ ನಿಂದು ? ಏನಯ್ಯ, ದೆವ್ವಕ್ಕೆ ಬಗ್ಗುತ್ತಾರೆಯೇ ? ಅದು ಮನುಷ್ಯರ ಶತ್ರು ಅಲ್ಲವೇ, ಯೋಚನೆ ಮಾಡು.

ಮಾಲ್ವೋಲಿಯೊ: ನೀನು ಏನು ಹೇಳ್ತಿರೋದು ಅಂತ ಗೊತ್ತಾ ನಿಂಗೆ ?

ಮರೀಯ: ನೋಡಿದ್ರ! ನೀವು ದೆವ್ವದ ಬಗ್ಗೆ ಕೆಟ್ಟ ಮಾತಾಡಿದ್ರೆ ಅವರಿಗೆ ಹೇಗೆ ಕೋಪ ಬರುತ್ತೇ ಅಂತ! ದೇವರ ದಯೆಯಿಂದ ಇವರ ಮೇಲೆ ಯಾರೂ ಮಾಟ ಮಾಡಿರದಿದ್ದರೆ ಸಾಕು.

ಫೇಬಿಯನ್: ಅವನ 'ಜಲ'ವನ್ನ ಮಾಟಗಾತಿ ಹತ್ತಿರ ತಗೊಂಡು ಹೋಗು.

ಮರೀಯ: ಅದನ್ನ ನಾಳೆ ಬೆಳಿಗ್ಗೆ ಮಾಡೋಣ, ಬದುಕಿದ್ದರೆ. ಇವರನ್ನ ಕಳೆದುಕೊಳ್ಳೋದು ಒಡತೀರಿಗೆ ಎಷ್ಟು ಇಷ್ಟ ಇಲ್ಲ ಅನ್ನೋದನ್ನ ಹೇಳೋಕೆ ಆಗಲ್ಲ.

ಮಾಲ್ವೋಲಿಯೊ: ಏನು ಸಮಾಚಾರ, ಹೆಣ್ಣೆ?

ಮರೀಯ: (ಗಂಟಲು ಹಿಡಿದಂತೆ) ಅಯ್ಯೋ!

ಸರ್ ಟೋಬಿ: ದಯವಿಟ್ಟು, ಸುಮ್ನಿರು. ಇದಲ್ಲ ರೀತಿ. ನಿನ್ನ ನೋಡಿದ್ರೆ ಅವನಿಗೆ ಕೆರಳೋದು ಕಾಣೋಲ್ವ ? ನಾನೊಬ್ಬನೇ ಅವನ್ನ ನೋಡ್ಕೋತೀನಿ, ಬಿಡು.

ಫೇಬಿಯನ್: ನಯವನ್ನ ಬಿಟ್ಟರೆ ಬೇರೆ ಮಾರ್ಗವೇ ಇಲ್ಲ. ನಯವಾಗಿ, ನಯವಾಗಿ. ದೆವ್ವ ಗಡುಸಾಗಿದೆ, ಅದರ ಜೊತೇಲಿ ಗಡುಸಾಗಿ

ನಡಕೋಬಾರ್ದು.

ಸರ್ ಟೋಬಿ : ಏನು ಸಮಾಚಾರ, ಮರಿ ? ಹೇಗಿದ್ದೀ ಪುಟ್ಟಿ?

ಮಾಲ್ವೋಲಿಯೊ : ಸ್ವಾಮಿ!

ಸರ್ ಟೋಬಿ : ಏ ಪುಟಾಣಿ ನನ್ನೊತ್ತೆ ಬಾ. ಏನಪ್ಪ ಇದು ? ದೆವ್ವದ ಜೊತೆ ಗೋಲಿ ಆಡೋದು ನಿನ್ನಂಥೋರಿಗೆ ಮರ್ಯಾದೆ ತರೋಲ್ಲ. ಈ ದುಷ್ಟ ಕರಿಕನ್ನ ನೇಣುಹಾಕು.

ಮರೀಯ : ಅವರು ಪ್ರಾರ್ಥನೆ ಮಾಡೋದಕ್ಕೆ ಹೇಳಿ, ಸರ್ ಟೋಬಿ ಪ್ರಾರ್ಥನೆ ಮಾಡಲಿ.

ಮಾಲ್ವೋಲಿಯೊ : ಪ್ರಾರ್ಥನೆ ಮಾಡ್ಬೇಕ, ಹರಾಮಿ!

ಮರೀಯ : ಇಲ್ಲ ನಾನು ಹೇಳ್ತೀನಿ ಕೇಳಿ. ದೇವರ ಮಾತು ಕೂಡ ಕೇಳೊಲ್ಲ ಅವ್ರು.

ಮಾಲ್ವೋಲಿಯೊ : ಹೋಗಿ, ಎಲ್ಲಾದ್ರೂ ಸಾಯ್ರಿ ಎಲ್ಲ! ನೀವೆಲ್ಲ ಸೋಮಾರಿ ಪೊಳ್ಳು ಕ್ರಿಮಿಗಳು – ನಾನು ನಿಮ್ಮ ಥರಾ ಅಲ್ಲ – ಆಮೇಲೆ ನಿಮಗೆ ತಿಳಿಯುತ್ತೆ.

(ಅವನು ಹೋಗುತ್ತಾನೆ ; ಆಶ್ಚರ್ಯದಿಂದ ಅವರು ಅವನನ್ನೇ ನೋಡುತ್ತಾರೆ)

ಸರ್ ಟೋಬಿ : ಇದನ್ನೆಲ್ಲ ನಂಬೋದಕ್ಕೆ ಸಾಧ್ಯವೇ ?

ಫೇಬಿಯನ್ : ಇದನ್ನ ನಾಟಕದಲ್ಲೇನಾದ್ರೂ ತೋರ್ಸಿದ್ದಿದ್ರೆ ಇದೆಲ್ಲ ಕಟ್ಟುಕತೆ ಅಂತ ನಾನು ಹೀಗಳೀತಿದ್ದೆ.

ಸರ್ ಟೋಬಿ : ಈ ಉಪಾಯದ ಸೋಂಕು ಅವನ ರಕ್ತಾನೇ ಸೇರ್ಬಿಟ್ಟಿದೆ.

ಮರೀಯ : ಈ ಉಪಾಯ ಬಯಲಾಗಿಬಿಟ್ಟೀತು – ಅವನ ಹಿಂದೇನೇ ನಡೀರಿ.

ಫೇಬಿಯನ್ : ಅದೇಕೆ, ಅವನಿಗೆ ನಿಜವಾಗೇ ಹುಚ್ಚು ಹಿಡಿಸ್ಬಿಡತೀವಿ.

ಮರೀಯ : ಆಗ ಮನೆ ಹೆಚ್ಚು ಶಾಂತವಾಗಿರತ್ತೆ.

ಸರ್ ಟೋಬಿ : ಬನ್ನಿ, ಅವನ್ನ ಹಿಡಿದು ಕತ್ತಲೆ ಕೋಣೇಲಿ ಕಟ್ಟಿ ಹಾಕೋಣ. ಅವನ್ನ ಹುಚ್ಚ ಅಂತ ನನ್ನ ಸೊಸೆ ನಂಬಿಕೊಂಡಿದ್ದಾಳೆ; ಇದನ್ನ ಮುಂದುವರ್ಸಿ ನಾವು ಖುಷಿ ಪಡಬೇಕು, ಅವನಿಗೆ ಪ್ರಾಯಶ್ಚಿತ್ತವಾಗ್ಬೇಕು. ನಮಗೆ

ಮನರಂಜನೆ ಸಾಕು ಅಷ್ಟೆ, ಸುಸ್ತಾಗಿ ದಯೆ ತೋರಿಸ್ಬೇಕು ಅಷ್ಟೇಕು. ಅಷ್ಟು ಹೊತ್ತಿಗೆ ಅವನ ವಿಚಾರಣೆ ಆರಂಭವಾಗಿರುತ್ತೆ. ಹುಚ್ಚನನ್ನ ಕಂಡುಹಿಡಿದದ್ದರಿಂದ ನಿನಗೆ ಬಹುಮಾನ ಸಿಗುತ್ತೆ. ಇಲ್ಲಿ ನೋಡಿ. ಇಲ್ಲಿ ನೋಡಿ.

(ಸರ್ ಆಂಡ್ರ್ಯೂ ಅಗ್ಯುಚೀಕ್ ಬರುತ್ತಾನೆ, ಅವನ ಕೈಯಲ್ಲೊಂದು ಕಾಗದ)

ಫೇಬಿಯನ್ : ನಮ್ಮ ಸುಗ್ಗೀ ಕಾಲಕ್ಕೆ ಇನ್ನೊಂದಷ್ಟು ಬೆಳೆ.

ಸರ್ ಆಂಡ್ರ್ಯೂ : ಇಲ್ಲಿದೆ ಸವಾಲು, ಓದು ಅದನ್ನು, ಅದರಲ್ಲಿ ಉಪ್ಪು ಖಾರ ಹೇಗೆ ಸೇರ್ಕೊಂಡಿದೆ ನೋಡು.

ಫೇಬಿಯನ್ : ಅಷ್ಟು ರುಚಿಯಾಗಿದೆಯೇನದು ?

ಸರ್ ಆಂಡ್ರ್ಯೂ : ಇಲ್ವೆ ಮತ್ತೆ ? ಅವನಿಗೇ ಗೊತ್ತಾಗತ್ತೆ : ಓದು ಅದನ್ನ.

ಸರ್ ಟೋಬಿ : ಎಲ್ಲಿ ಕೊಡು. (ಓದುತ್ತಾನೆ) "ಎಲೆ ಪಡ್ಡೆ ಹುಡುಗ, ನೀನು ಯಾರೇ ಆಗಿರು, ನೀನೊಬ್ಬ ಕ್ಷುದ್ರ ಮನುಷ್ಯ."

ಫೇಬಿಯನ್ : ಭೇಷ್, ಚೆನ್ನಾಗಿದೆ. ವೀರ್ಯವತ್ತಾಗಿದೆ.

ಸರ್ ಟೋಬಿ : (ಓದುತ್ತಾನೆ) "ನಾನು ನಿನ್ನನ್ನು ಈ ರೀತಿ ಕರಿಯುತ್ತಿರುವುದನ್ನು ನೋಡಿ ಆಶ್ಚರ್ಯವೂ ಪಡಬೇಡ, ಮನಸ್ಸಿನಲ್ಲೇ ಬೆರಗಾಗಲೂ ಬೇಡ. ಅದಕ್ಕೆ ನಾನು ಯಾವ ಕಾರಣವನ್ನೂ ಕೋಡೋದಿಲ್ಲ."

ಫೇಬಿಯನ್ : ಒಳ್ಳೆ ಬರವಣಿಗೆ, ಇದು ನಿಮ್ಮನ್ನು ಕಾನೂನಿನ ಹೊಡೆತದಿಂದ ತಪ್ಪಿಸ್ತೆ.

ಸರ್ ಟೋಬಿ : (ಓದುತ್ತಾನೆ) "ನೀನು ಒಡತಿ ಒಲಿವಿಯ ಅವರ ಹತ್ತಿರ ಬರುತ್ತೀಯೆ, ಅವರು ನನ್ನ ಕಣ್ಣ ಮುಂದೆಯೇ ನಿನ್ನನ್ನ ವಿಶ್ವಾಸದಿಂದ ಕಾಣುತ್ತಾರೆ. ನಿನ್ನ ಗಂಟಲಿನಿಂದ ಸುಳ್ಳು ಬರುತ್ತದೆ, ಆದರೆ ನಾನು ಅದಕ್ಕಾಗಿ ನಿನ್ನ ಮೇಲೆ ಸವಾಲು ಹಾಕುತ್ತಿಲ್ಲ."

ಫೇಬಿಯನ್ : ತುಂಬಾ ಚೊಕ್ಕವಾಗಿದೆ; ಅರ್ಥವಂತೂ ತುಂಬ ಚೆನ್ನಾ (ತನ್ನಲ್ಲಿ) ಗಿಲ್ಲ.

ಸರ್ ಟೋಬಿ : (ಓದುತ್ತಾನೆ) "ನೀನು ಮನೆಗೆ ಹೋಗುವ ದಾರಿಯಲ್ಲಿ ನಾನು ಅಡ್ಡ ಹಾಕುತ್ತೇನೆ, ಆಗ ನನ್ನ ಕೊಲ್ಲುವುದಕ್ಕೆ ನಿನಗೆ ಅವಕಾಶವೊದಗಿದರೆ —"

ಫೇಬಿಯನ್ : ಭೇಷ್ !

ಸರ್ ಟೋಬಿ : (ಓದುತ್ತಾನೆ) ''ನೀನು ನನ್ನನ್ನು ಠಕ್ಕನ ಹಾಗೆ, ಖೂಳನ ಹಾಗೆ ಕೊಲ್ಲುತ್ತೀಯೆ''

ಫೇಬಿಯನ್ : ಈಗಲೂ ಕಾನೂನಿನ ಗಾಳಿ ನಿಮ್ಮ ಕಡೇನೇ ಬೀಸ್ತಾ ಇದೆ – ಭೇಷ್.

ಸರ್ ಟೋಬಿ : (ಓದುತ್ತಾನೆ) ''ನಮಸ್ಕಾರ. ದೇವರು ನಮ್ಮಿಬ್ಬರಲ್ಲಿ ಒಬ್ಬರ ಮೇಲೆ ಕರುಣೆಯಿಡಲಿ : ಅವನು ನನ್ನ ಮೇಲೆ ಕರುಣೆಯಿಡಬಹುದು ; ಏಕೆಂದರೆ ನನಗೆ ದೇವರ ಬಗ್ಗೆ ನಂಬಿಕೆಯಿದೆ, ಆದ್ದರಿಂದ ನಿನ್ನ ಪಾಡು ನೀನು ನೋಡಿಕೋ. ನಿನ್ನ ಸ್ನೇಹಿತ, ಹಾಗೆ ಭಾವಿಸುವುದಾದರೆ ; ಇಲ್ಲದಿದ್ದರೆ ನಿನ್ನ ಕೆಟ್ಟ ಶತ್ರು — ಆಂಡ್ರ್ಯೂ ಆಗ್ಯುಚೀಕ್'' ಈ ಕಾಗದ ಅವನನ್ನ ಕದಲಿಸಕ್ಕೆ ಆಗ್ದಿದ್ರೆ, ಅವನ ಕಾಲೂ ಕದಲಿಸಲಾರವು. ಇದನ್ನು ಅವನಿಗೆ ಕೊಡ್ತೀನಿ.

ಮರೀಯ: ನಿಂಗೆ ಅದಕ್ಕೆ ಒಳ್ಳೆ ಅವಕಾಶ ಸಿಕ್ಕಬಹುದು. ಈಗ ಮಾತ್ರ ಅವನು ಒಡತೀರ ಹತ್ರ ಏನೋ ಕೆಲಸದಲ್ಲಿ ತೊಡಗಿದ್ದಾನೆ. ಇಷ್ಟರಲ್ಲೇ ವಾಪಸ್ಸು ಹೋಗ್ತಾನೆ.

ಸರ್ ಟೋಬಿ : ಹೋಗು. ಸರ್ ಆಂಡ್ರ್ಯೂ ; ತೋಟದ ಮೂಲೇಲಿ ನಿಂತ್ಕೊಂಡು ಅಮೀನನ ಹಾಗೆ ಕಾಯ್ತಾ ಇರು. ಅವನು ಕಣ್ಣಿಗೆ ಬಿದ್ದ ತಕ್ಷಣ ಕತ್ತಿ ಹಿರಿ, ಹಾಗೇ ಕತ್ತೀ ಹಿರೀತ ಭಯಂಕರವಾಗಿ ಸವಾಲನ್ನ ಸುರಿ. ಯಾಕೇಂದ್ರೆ, ದರ್ಪದಿಂದ ಹರಿತವಾದ ಸವಾಲನ್ನ ಟೇಂಕರಿಸಿದರೆ ಎಷ್ಟೋ ಸಲ ಕೆಲಸ ಮಾಡಿ ತೋರ್ರೋದಕ್ಕಿಂತ ಹೆಚ್ಚಿಗೆ ಪರಿಣಾಮಕಾರಿಯಾಗುತ್ತೆ. ಹ್ಞೂ, ನಡಿ.

ಸರ್ ಆಂಡ್ರ್ಯೂ : ಸರಿ, ಸವಾಲು ಹಾಕೋದಕ್ಕೆ ನಾನೊಬ್ನೆ ಹೋಗ್ತೀನಿ.
(ಹೊರಗಿನ ಬಾಗಿಲ ಮೂಲಕ ತೋಟದೊಳಕ್ಕೆ ಹೋಗುವನು)

ಸರ್ ಟೋಬಿ : ನಾನೀಗ ಅವ್ನ ಕಾಗದ ತಲುಪಿಸೋದಿಲ್ಲ, ಯಾಕಂದ್ರೆ, ಆ ಯುವಕನ ನಡತೇನ ನೋಡಿದ್ರೆ ಒಳ್ಳೆ ಕುಲದೋನು, ಸಾಮರ್ಥ್ಯ ಇರೋನು ಅಂತ ಗೊತ್ತಾಗತ್ತೆ ; ತನ್ನ ಒಡೆಯರು – ನನ್ನ ಸೊಸೆ ಇವರ ಮಧ್ಯೆ ಅವ್ನು ಓಡಾಡ್ತಾ ಇರೋದೇ ಇದಕ್ಕೆ ಸಾಕ್ಷಿ, ಆದ್ದರಿಂದ ಈ ಮುದ್ದಾದ ಮೂರ್ಖ ಕಾಗದ ಅವನಿಗೆ ಯಾವ ಭಯಾನೂ ಹುಟ್ಟಿಸೋದಿಲ್ಲ. ಇದನ್ನು ಯಾರೋ ತಲೇ ಕೆಟ್ಟೋನು ಬರ್ದಿದಾನೆ

ಅಂತಾನೇ ಅವನು ತಿಳ್ಕೋತಾನೆ. ಆದರೆ ಇವನ ಸವಾಲನ್ನ ಬಾಯಿ ಮಾತಿಂದ್ಲೇ ಹೇಳ್ತೀನಿ. ಆಗ್ಯುಚೀಕ್ ಒಳ್ಳೆ ಶೂರಾಂತ ಹೇಳಿ ಅವನ್ನ ರೇಗಿಸಿದ್ರೆ, ಅವನು ಹೇಗಿದ್ರೂ ಇನ್ನೂ ಯುವಕ, ತನಗೆ ತಕ್ಕ ಹಾಗೆ ಅವನ ಕೋಪ ಚಾತುರ್ಯ ಬಿರುಸು ಒರಟುತನ ಇವುಗಳು ಹೇಗಿರ್ಬೋದು ಅಂತ ಊಹಿಸ್ತಾನೆ. ಒಬ್ಬರ ಮೇಲೊಬ್ಬರಿಗೆ ಕೋಪ ಹತ್ತಿ ಅಜಗರ ಹೋತಾನೂ ನುಂಗೋ ಹಾಗೆ ಇವರು ನೋಟದಿಂದಲೇ ಒಬ್ಬರನ್ನೊಬ್ರು ನುಂಗಿಬಿಡ್ತಾರೆ.
(ಒಲಿವಿಯ ಮತ್ತು ವಯೋಲ ಮನೆಯಿಂದ ಬರುತ್ತಾರೆ).

ಫೇಬಿಯನ್ : ಅಗೋ ಅವರು ನಿಮ್ಮ ಸೊಸೆ ಜೊತೇಲಿ ಇಲ್ಲಿಗೇ ಬರ್ತಿದಾರೆ — ಅವರು ಹೊರಡೋವರ್ಗೂ ಅವಕಾಶ ಕೊಡು, ಆಮೇಲೆ ಹಿಂಬಾಲಿಸು. (ಸರ್ ಟೋಬಿ, ಫೇಬಿಯನ್ ಮತ್ತು ಮರೀಯ ತೋಟದೊಳಕ್ಕೆ ಹೋಗುತ್ತಾರೆ).

ಒಲಿವಿಯ : ಕಲ್ಲಿನ ಹೃದಯವೊಂದಕ್ಕೆ ವಿಪರೀತ ಹೇಳಿಕೊಂಡು
ನನ್ನ ಮರ್ಯಾದೆಯನ್ನು ಬೇಕಾಬಿಟ್ಟಿ ಹೊರಚೆಲ್ಲಿದ್ದೇನೆ,
ನನ್ನ ತಪ್ಪನ್ನು ನನ್ನಲ್ಲಿನ ಏನೋ ಆಕ್ಷೇಪಿಸುತ್ತಿದೆ;
ಆದರೆ ಅದು ಎಂಥ ಹಟಮಾರಿ ತಪ್ಪೆಂದರೆ
ಎಂಥ ಆಕ್ಷೇಪಣೆಯನ್ನೂ ಅಣಕಿಸುತ್ತದೆ.

ವಯೋಲ : ನಿಮ್ಮ ಪ್ರೇಮಭರದ ರೀತಿಯಿಂದಾಗಿಯೇ
ನಮ್ಮ ಒಡೆಯರ ದುಃಖವೂ ಉಂಟಾಗಿದೆ.

ಒಲಿವಿಯ : ಇಗೋ ನನಗಾಗಿ ಈ ಆಭರಣ ಸ್ವೀಕರಿಸಿ,
ಇದು ನನ್ನ ಚಿತ್ರ; ನಿರಾಕರಿಸಬೇಡಿ,
ನಿಮ್ಮನ್ನು ಕಾಡಿಸಲು ಅದಕ್ಕೆ ನಾಲಗೆಯೇ ಇಲ್ಲ.
ಬೇಡಿಕೊಳ್ಳುತ್ತೇನೆ, ನಾಳೆ ಮತ್ತೆ ಬನ್ನಿ.
ನನ್ನಿಂದೇನು ಬಯಸುತ್ತೀರಿ ನೀವು, ನಾನು
ಕೊಡಬಹುದಾದ್ದು, ಕೊಟ್ಟಾಗ ನನ್ನ ಮರ್ಯಾದೆ
ಕುಂದದಂಥಾದ್ದು, ಆದರೂ ಇಲ್ಲ ಎನ್ನುವುದು?

ವಯೋಲ : ಇಷ್ಟೆ; ನಮ್ಮ ಒಡೆಯರಿಗೆ ನಿಮ್ಮ ನಿಜವಾದ ಪ್ರೀತಿ.

ಒಲಿವಿಯ : ನಾನು ನಿಮಗೆ ನೀಡಿರುವುದನ್ನು

ಅವರಿಗೆ ಮತ್ತೆ ನೀಡಿದರದು ಮರ್ಯಾದೆ ಕೆಲಸವೇ ?

ವಯೋಲ: ನನ್ನಿಂದ ನಿಮ್ಮನ್ನು ವಿಮೋಚನೆಗೊಳಿಸುತ್ತೇನೆ.

ಒಲಿವಿಯ: ಒಳ್ಳೆಯದು, ನಾಳೆ ಬನ್ನಿರಿ ಮತ್ತೆ.
ನಾನು ನಿಮ್ಮಂತಿರುವ ಭೂತದ ಹಿಂದೆ ನರಕಕ್ಕೂ ಬರಬಲ್ಲೆ.
(ಅವಳು ಒಳಗೆ ಹೋಗುತ್ತಾಳೆ ; ವಯೋಲ ಹೊರಬಾಗಿಲಿನೆಡೆ ತಿರುಗುತ್ತಾಳೆ).
(ಸರ್ ಟೋಬಿ ಬೆಲ್ಚ್ ಮತ್ತು ಫೇಬಿಯನ್ ಬರುತ್ತಾರೆ)

ಸರ್ ಟೋಬಿ: ಸ್ವಾಮಿ, ದೇವರು ನಿಮಗೆ ಒಳ್ಳೇದನ್ನ ಮಾಡಲಿ.

ವಯೋಲ: (ತಿರುಗಿ) ನಿಮಗೂ, ಸ್ವಾಮಿ.

ಸರ್ ಟೋಬಿ: ನಿಮಗೆ ಏನೇನು ರಕ್ಷಣೆಯ ಕ್ರಮಗಳಿವೆಯೋ ಎಲ್ಲವನ್ನೂ ಒಂದುಗೂಡಿಸಿಕೊಳ್ಳಿ. ಅವರಿಗೆ ನೀವೇನು ತೊಂದರೆ ಮಾಡಿದೀರೋ ನಂಗೆ ಗೊತ್ತಿಲ್ಲ. ಆದರೆ ಅವರಂತೂ ಕೋಪದಿಂದ, ಬೇಟೆನಾಯಿ ಹಾಗೆ ರಕ್ತ ದಾಹದಿಂದ ತೋಟದ ಮೂಲೇಲಿ ನಿಮ್ಮನ್ನು ತಡೆಯೋಕೆ ಕಾಯ್ತಾ ನಿಂತಿದಾರೆ, ಕತ್ತೀನ ಸೆಳೆದು ಬೇಗ ಸಿದ್ಧವಾಗಿ, ನಿಮ್ಮ ಮೇಲೆ ಬೀಳೋ ಆ ಅವರು ಮಿಂಚಿನ ಹಾಗೆ ಚಾಣಾಕ್ಷ, ಯಮನ ಹಾಗಿದಾರೆ.

ವಯೋಲ: ನೀವೆಲ್ಲೋ ತಪ್ಪು ತಿಳಿದಿದೀರಿ, ಸ್ವಾಮಿ. ಯಾರೂ ನನ್ನ ಜೊತೆ ಜಗಳ ಮಾಡೋಲ್ಲ, ಏಕೆಂದ್ರೆ, ನಾನು ಯಾರಿಗೂ ಎಂದಿಗೂ ತೊಂದರೆ ಮಾಡಿಲ್ಲ ಅನ್ನೋ ನೆನಪು ನನ್ನ ಮನಸ್ಸಿನಲ್ಲಿ ತುಂಬ ಸ್ಪಷ್ಟವಾಗಿದೆ.

ಸರ್ ಟೋಬಿ: ಖಂಡಿತ, ನೀವು ತಿಳುಕೊಂಡಿರೋದಕ್ಕೆ ವ್ಯತಿರಿಕ್ತವಾದ್ದು ನಡೆಯುತ್ತೆ. ಆದ್ರಿಂದ, ನಿಮ್ಮ ಜೀವಕ್ಕೆ ಏನಾದ್ರೂ ಬೆಲೆ ಇದೇಂತ ನಿಮಗೆ ಅನ್ನಿಸಿದ್ರೆ, ಜೀವ ಉಳಿಸ್ಕೊಳ್ಳೋ ಉಪಾಯ ನೋಡ್ಕೊಳ್ಳಿ. ಹರೆಯ, ಶಕ್ತಿ, ಕೋಪಗಳೆಲ್ಲ ಸೇರಿದರೆ ಏನು ಆಗಬಹುದೋ ಅದೆಲ್ಲ ನಿಮ್ಮ ವಿರೋಧಿ ಹತ್ರ ಇದೆ.

ವಯೋಲ: ಅವರು ಯಾರು ಸ್ವಾಮಿ, ದಯವಿಟ್ಟು ಹೇಳಿ.

ಸರ್ ಟೋಬಿ: ಅವರೊಬ್ಬ ಸಂಪ್ರದಾಯಕ್ಕೆ ಅಲಂಕಾರದ ಕತ್ತಿಯ ಪಟ್ಟನಿಂದಾದ ನೈಟ್, ಆದರೂ ಖಾಸಗೀ ಜಗಳದಲ್ಲಿ ದೆವ್ವದ ಹಾಗೆ ಕಾದಾಡ್ತಾರೆ.

ಈಗಾಗಲೇ ಮೂವರ ದೇಹ-ಜೀವಗಳನ್ನ ಅವರು ಬೇರೆ ಮಾಡ್ತಿದಾರೆ. ಈಗ ಅವರ ಕೋಪ ಎಷ್ಟು ಕಠೋರವಾಗಿದೇಂದ್ರೆ ಸಾವಿನ ನೋವು-ಗೋರಿ ಇವನ್ನ ಬಿಟ್ಟರೆ ಅವರಿಗೆ ಸಮಾಧಾನವಾಗೋ ಅಂಥಾದ್ದು ಯಾವುದೂ ಕಾಣಿಸೋಲ್ಲ. ನಾನುಳಿಬೇಕು ಇಲ್ಲ ನೀನುಳೀಬೇಕು ಅನ್ನೋ ಸ್ವಭಾವ ಅವರದ್ದು. ಹೊಡಿಬೇಕು ಇಲ್ಲ ಸಾಯಬೇಕು.

ವಯೋಲ: ನಾನು ಮತ್ತೆ ಮನೆ ಒಳಗೇ ಹೋಗಿ ಒಡತೀರ ರಕ್ಷಣೆ ಕೇಳ್ತೇನೆ. ನಾನೇನೂ ಹೋರಾಟಗಾರನಲ್ಲ. ತಮ್ಮ ಶೌರ್ಯ ತೋರಿಸ್ಕೊಳ್ಳೋಕೆ ಕೆಲವರು ಕಾಲು ಕೆರಕೊಂಡು ಜಗಳಕ್ಕೆ ಬರ್ತಾರೆ ಅಂತ ಕೇಳಿದ್ದೇನೆ. ಇವರೂ ಅಂಥವರ ಹಾಗೇ ಕಾಣಿಸ್ತಾರೆ.

ಸರ್ ಟೋಬಿ: ಇಲ್ಲ, ಸ್ವಾಮಿ. ಅವರ ಕೋಪಕ್ಕೆ ಅವರಿಗಾಗಿರೋ ದೊಡ್ಡ ಅನ್ಯಾಯವೇ ಕಾರಣ ; ಆದ್ರಿಂದ ಮುಂದೆಹೋಗಿ ಅವರಿಗೆ ತಕ್ಕದ್ದನ್ನು ಕೊಡಿ. ನೀವು ಮನೆ ಒಳಕ್ಕೆ ಹೋಗ್ಬೇಕಾದ್ರೆ, ನನ್ನ ಜೊತೆ ಕಾದಾಡ್ಬೇಕು ; ಅದರ ಬದಲು ಅಷ್ಟೇ ಅಪಾಯವಿಲ್ಲದೆ ನೀವು ಅವರನ್ನೆದುರಿಸಬಹುದು. ಆದ್ದರಿಂದ ಮುಂದೆ ನಡೀರಿ, ಇಲ್ಲ ಕತ್ತೀನ ಹಿರಿದು ಹೋರಾಟಕ್ಕೆ ಸಿದ್ಧವಾಗಿ. ನೀವು ಹೋರಾಡಲೇ ಬೇಕು ಅನ್ನೋದಂತೂ ನಿಶ್ಚಯ. ಇಲ್ಲದಿದ್ರೆ, ಇನ್ನು ಮೇಲೆ ಕತ್ತಿ ಕಟ್ಬೋಲ್ಲ ಅಂತ ಆಣೆಮಾಡಿ.

ವಯೋಲ: ಇದು ವಿಚಿತ್ರ, ಅಷ್ಟೇ ಅನಾಗರಿಕ. ನಿಮ್ಮನ್ನು ನಾನು ಕೇಳಿಕೊಳ್ಳುವುದಿಷ್ಟೆ ; ನಾನು ನಿಮ್ಮ ನೈಟ್‌ಗೆ ಏನು ಅಪರಾಧ ಮಾಡಿದ್ದೀನಿ ಅನ್ನೋದನ್ನ ಕೇಳಿ ತಿಳಕೊಂಡು ಬರೋ ಕೃಪೆ ಮಾಡಬೇಕು. ಅಂಥದೇನಾದರೂ ಆಗಿದ್ರೆ, ನನಗೆ ತಿಳೀದೇ ಆಗಿರಬಹುದೇ ಹೊರತು ಉದ್ದೇಶ ಪೂರ್ವಕವಾಗಿ ಅಲ್ಲ.

ಸರ್ ಟೋಬಿ: ಆಗಲಿ, ಹಾಗೇ ಮಾಡ್ತೀನಿ. ಸ್ವಾಮಿ ಫೇಬಿಯನ್ (ಅವನು ಕಣ್ಣು ಮಿಟುಕಿಸುತ್ತಾನೆ) ನಾನು ಬರೋವರ್ಗೂ ಇವರ ಹತ್ತಿರ ನಿಲ್ಲಿ.

(ಹೊರ ಬಾಗಿಲಿನಿಂದ ಹೊಗುತ್ತಾನೆ)

ವಯೋಲ: ಸ್ವಾಮಿ, ಈ ವಿಷಯ ತಮಗೂ ಗೊತ್ತೇನು ?

ಫೇಬಿಯನ್: ನಿಮ್ಮ ಮೇಲೆ ಆ ನೈಟ್‌ಗೆ ತುಂಬ ಕೋಪವಿದೆ, ಹೊಡೆದಾಡಿ

ಕೊಲ್ಲಬೇಕು ಅನ್ನೋ ಅಷ್ಟು. ಅಷ್ಟು ಗೊತ್ತೇ ಹೊರತು ಹೆಚ್ಚು ಗೊತ್ತಿಲ್ಲ.

ವಯೋಲ: ದಯವಿಟ್ಟು ಹೇಳಿ, ಅವರು ಎಂಥ ಮನುಷ್ಯ ?

ಫೇಬಿಯನ್ : ಅವರ ಆಕಾರ ನೋಡಿ ಅವರ ಆಂತರ್ಯ ಹೇಳೋಕೆ ಸಾಧ್ಯವಿಲ್ಲ. ಹೋರಾಟದಲ್ಲಿ ಅವರದೆಂಥ ಶೌರ್ಯ ಅನ್ನೋದು ನಿಮಗೇ ಗೊತ್ತಾಗುತ್ತಲ್ಲ. ಇಡೀ ಇಲ್ಲೀರಿಯದಲ್ಲೇ ಅವರಂಥ ಕುಶಲರೂ, ಕ್ರೂರಿಯೂ ಯಮದೂತನಂಥೋರೂ ಆಗಿರೋ ವಿರೋಧಿಯನ್ನ ನೀವು ಕಾಣಕ್ಕೆ ಸಾಧ್ಯವಿಲ್ಲ. (ಅವಳ ತೋಳನ್ನ ಹಿಡಿದುಕೊಂಡು) ನೀವು ಅವರ ಹತ್ತಿರ ಬರ್ತೀರೇನು, ಸಾಧ್ಯವಾದರೆ ರಾಜಿ ಮಾಡಿಸೋದಕ್ಕೆ ಪ್ರಯತ್ನಪಡ್ತೀನಿ.

ವಯೋಲ: ಅಷ್ಟು ಮಾಡಿದ್ರೆ ನಾನು ತುಂಬ ಋಣಿಯಾಗಿರ್ತೇನೆ. ನಾನು ಪುರೋಹಿತರ ಜೊತೇಲಿರೋ ಅಂಥ ಮನುಷ್ಯನೇ ಹೊರತು ನೈಟ್‌ಗಳ ಜೊತೆ ಹೋರಾಡೋ ಅಂಥವನಲ್ಲ. ನನ್ನ ಧೈರ್ಯ ಬೇರೆಯವರಿಗೆ ಗೊತ್ತಾಗಿ ಬಿಡುತ್ತಲ್ಲ ಅನ್ನೋ ಯೋಚನೇನೂ ನನಗಿಲ್ಲ. (ಅವರು ತೋಟದಿಂದ ಹೊರಗೆ ಹೋಗುತ್ತಾರೆ)

(ಒಲಿವಿಯಳ ಮನೆ ತೋಟದ ಹಿಂದಿನ ಪ್ರಶಾಂತವಾದ ಬೀದಿ ; ಅಲ್ಲಿಂದ ತೋಟಕ್ಕೆ ಬಾಗಿಲಿದೆ, ಮರಗಳು-ಪೊದೆಗಳು)

(ಸರ್ ಟೋಬಿ ಮತ್ತು ಸರ್ ಆಂಡ್ರ್ಯೂ)

ಸರ್ ಟೋಬಿ : ಅಯ್ಯಬ್ಬ, ಅವನೊಂದು ಭೂತ ಬಿಡು, ಅಂಥ ಮಾರೀನ ನಾನಿದುವರ್ಗೂ ನೋಡಿರ್ಲಿಲ್ಲ. ಅವನ ಜೊತೆ ಸ್ವಲ್ಪ ಕತ್ತಿ, ಒರೆ ಎಲ್ಲದರ ರುಚಿ ನೋಡ್ದೆ. ತಿವಿಯೋ ರೀತಿಯಂತೂ ಕೊಲ್ಲುವಂಥಾದ್ದು, ಎದುರಿಸೋಕೇ ಸಾಧ್ಯವಿಲ್ಲ. ನಾವು ಹೊಡೆದರೆ ಅವನು ಮಾರು ಹೊಡೆತ ಕೊಡ್ತಾನಲ್ಲ, ಅದರಿಂದ ನಮ್ಮ ಕಾಲುಗಳು ನಿಂತ ನೆಲಕ್ಕೇ ಬೀಳುತ್ವೆ. ಅವನು ಪರ್ಷಿಯಾದ ಸೂಫಿಗೆ ಕತ್ತಿವರಸೆ ಹೇಳಿಕೊಟ್ಟೋನು ಅಂತ ಹೇಳ್ತಾರಪ್ಪ.

ಸರ್ ಆಂಡ್ರ್ಯೂ : ಎಲ್ಲಾದ್ರೂ ಹಾಳಾಗಲಿ, ನಾನಂತೂ ಅವನ ಗೋಜಿಗೆ ಹೋಗೋಲ್ಲ.

ಸರ್ ಟೋಬಿ : ಇರಬಹುದು, ಆದರೆ ಅವನೀಗ ಶಾಂತವಾಗೋ ಹಾಗಿಲ್ಲ.

ಫೇಬಿಯನ್ ತುಂಬಾ ಹೊತ್ತು ಅವನನ್ನ ಅಲ್ಲಿ ತಡೆದಿರಲಾರ.

ಸರ್ ಆಂಡ್ರ್ಯೂ : ಸಾಯಲಿ ಅದು. ಅವನು ಇಂಥ ಶೂರ, ಕತ್ತಿರಸೇಲಿ ಪ್ರವೀಣ ಅಂತ ಗೊತ್ತಿದ್ದಿದ್ರೆ ಎಲ್ಲಾದ್ರೂ ಹಾಳಾಗ್ಲಿ ಅಂತ ಬಿಟ್ಟುಬಿಡುತ್ತಿದ್ದೆನೇ ಹೊರತು ಅವನ ಮೇಲೆ ಸವಾಲು ಹಾಕ್ತಾ ಇರ್ಲಿಲ್ಲ. ಅವನು ಈ ವಿಷಯ ಬಿಟ್ಟುಬಿಡೋದಾದ್ರೆ ನಾನು ಅವನಿಗೆ ನನ್ನ ಬೂದು ಬಣ್ಣದ "ಉಚ್ಚೈಶ್ರವಸ್" ಕೊಡ್ತೀನಿ.

ಸರ್ ಟೋಬಿ : ನಾನು ಅವನಿಗೆ ಈ ವಿಚಾರ ಹೇಳ್ತೀನಿ. ಇಲ್ಲಿ ನಿಂತಿರು, ಚೆನ್ನಾಗಿ ಜಬರ್ದಸ್ತಿಂದ ನಿಂತಿರು. ಯಾರ ಜೀವಾನೂ ಹಾಳಾಗದ ಹಾಗೆ ವಿಚಾರ ಮುಕ್ತಾಯವಾಗತ್ತೆ. (ತನ್ನಲ್ಲಿ) ನಿಜವಾಗಿ ನಾನು ನಿನ್ನ ಕುದುರೆ ಸವಾರಿ ಮಾಡ್ತೀನಿ.

(ಫೇಬಿಯನ್ ಮತ್ತು ವಯೋಲ ತೋಟದೊಳಗಿನಿಂದ ಬರುತ್ತಾರೆ)

(ಸರ್ ಟೋಬಿ ಫೇಬಿಯನ್‌ನನ್ನು ಪಕ್ಕಕ್ಕೆ ಬರುವಂತೆ ಸೂಚಿಸುತ್ತಾನೆ) (ಫೇಬಿಯನ್‌ಗೆ ಮೆಲ್ಲಗೆ) ಈ ಜಗಳ ನಿಲ್ಲಿಸೋದಕ್ಕೆ ನಾನಿವನ ಕುದುರೆ ತೊಗೊತೀನಿ; ಆ ಯುವಕ ಪಿಶಾಚಿ ಹಾಗೆ ಅಂತ ಇವನಿಗೆ ನಂಬಿಕೆ ಬರೋ ಹಾಗೆ ಮಾಡಿದೀನಿ.

ಫೇಬಿಯನ್ : (ಮೆಲ್ಲಗೆ) ಅವನಿಗೂ ಇವನ್ನ ಕಂಡ್ರೆ ಅಂಥ ನಂಬಿಕೇನೇ ಇದೆ. ಕರಡಿ ಬೆನ್ನ ಹಿಂದೆ ಅಟ್ಟಿಸಿಕೊಂಡು ಬರ್ತಿರೋ ಹಾಗೆ ಅವನು ನಡುಗ್ತಿದ್ದಾನೆ, ಮುಖ ಬಿಳಚಿಕೊಂಡಿದೆ.

ಸರ್ ಟೋಬಿ : (ವಯೋಲಳಿಗೆ ಮೆಲ್ಲಗೆ) ಅದಕ್ಕೇನೂ ಉಪಾಯವೇ ಇಲ್ಲ, ಸ್ವಾಮಿ. ತಾವು ಮಾಡಿರೋ ಪ್ರತಿಜ್ಞೆ ಉಳಿಸ್ಕೊಳ್ಳೋದಕ್ಕೋಸ್ಕರ ಕಾದಾಡಬೇಕೂಂತ ಇದಾರೆ. ಅವರು ಅದರ ಬಗ್ಗೆ ಇನ್ನಷ್ಟು ಚೆನ್ನಾಗಿ ಯೋಚ್ನೆ ಮಾಡಿದಾರೆ; ಅದರ ಬಗ್ಗೆ ಮಾತಾಡೋಕೆ ಹೆಚ್ಚಿಗೆ ಏನಿಲ್ಲ ಅಂತ ಅವರ ಭಾವನೆ. ಅದಕ್ಕೋಸ್ಕರ ಅವರ ಮಾತು ಉಳಿಸೋದಕ್ಕಾಗಿ ಸಿದ್ಧರಾಗಿ. ನಿಮಗೆ ಯಾವ ತೊಂದರೇನೂ ಮಾಡಲ್ಲಾಂತ ಅವ್ರೂ ಪ್ರಮಾಣ ಮಾಡಿದಾರೆ.

ವಯೋಲ : (ತನ್ನಲ್ಲಿಯೇ) ದೇವರೇ ನನ್ನ ಕಾಪಾಡು! ಸ್ವಲ್ಪ ಮಿಸುಕಿದರೆ ಸಾಕು, ನನಗೆ ಎಷ್ಟರ ಮಟ್ಟಿಗೆ ಪುರುಷತ್ವದ ಕೊರತೆ ಇದೇಂತ ಗೊತ್ತಾಗಿಬಿಡತ್ತಲ್ಲ!

ಫೇಬಿಯನ್ : ಅವರು ತುಂಬಾ ಬಿರುಸಾಗಿರೋ ಹಾಗೆ ಕಂಡರೆ, ಶರಣಾಗಿಬಿಡಿ.

ಸರ್ ಟೋಬಿ : (ಮೆಲ್ಲಗೆ) ಬಾ, ಸರ್ ಆಂಡ್ರ್ಯೂ ; ಇದಕ್ಕೆ ಯಾವ ಉಪಾಯಾನೂ ಇಲ್ಲ, ಅವರು ಮರ್ಯಾದೆಗಾದರೂ ಕಾದಬೇಕಂತೆ. ದ್ವಂದ್ವ ಯುದ್ಧದ ನಿಯಮದ ಪ್ರಕಾರ ಸುಮ್ಮನಿರೋಕಾಗೋಲ್ವಂತೆ. ಅವರು ಸಭ್ಯರೂ ಯೋಧರೂ ಆಗಿರೋದರಿಂದ ನಿನಗೆ ಏಟೇನೂ ಬೀಳದೇ ಇರೋ ಹಾಗೆ ನೋಡ್ಕೋತಾರಂತೆ — ನನ್ನ ಮುಂದೆ ಪ್ರಮಾಣ ಮಾಡಿ ಹೇಳಿದಾರೆ. ಏಳು ಸಿದ್ಧವಾಗು !

ಸರ್ ಆ್ಯಂಡ್ರ್ಯೂ : ದೇವರೇ, ಅವರು ಪ್ರಮಾಣ ಮುರೀದಿರೋ ಹಾಗಾಗಲಿ !

ವಯೋಲ : ನಿಜವಾಗಿ ಹೇಳ್ತಿದ್ದೀನಿ, ಇದು ನನ್ನಿಷ್ಟಕ್ಕೆ ವಿರುದ್ಧ.

(ಹೋರಾಡಲು ಸಿದ್ಧರಾಗುತ್ತಾರೆ : ಆಂಟೋನಿಯೋ ಬರುತ್ತಾನೆ)

ಆಂಟೋನಿಯೊ : (ಸರ್ ಆಂಡ್ರ್ಯೂಗೆ) ಕತ್ತಿಯನ್ನೊರೆಗೆ ಸೇರಿಸಿ. ಈ ಸಭ್ಯ ಯುವಕರು ನಿಮಗೆ ಅಪಚಾರ ಮಾಡಿದ್ದರೆ, ಅದನ್ನ ನಾನು ಹೊರುತ್ತೇನೆ. ನೀವೇನಾದರೂ ಅವರನ್ನು ನೋಯಿಸುವುದಾದರೆ ಅವರ ಪರವಾಗಿ ನಾನು ಹೋರಾಡುತ್ತೇನೆ.

ಸರ್ ಟೋಬಿ : ನೀವೇ ಸ್ವಾಮಿ ? ಯಾರು ನೀವು ?

ಆಂಟೋನಿಯೊ : ಯಾರೂ ಅಂದರೆ, ಪ್ರೀತಿಗೋಸ್ಕರವಾಗಿ ಬಡಾಯಿ ಕೊಚ್ಚಿಕೊಳ್ಳುವುದಕ್ಕಿಂತ ಹೆಚ್ಚಾಗಿ ಏನು ಬೇಕಾದರೂ ಮಾಡುವ ಧೈರ್ಯವುಳ್ಳವನು.

ಸರ್ ಟೋಬಿ : ನೀವು ಅವರ ರಕ್ಷಣೆಗೆ ಬಂದರೆ ನಾನು ನಿಮ್ಮನ್ನೆದುರಿಸುತ್ತೇನೆ.

(ಅವರಿಬ್ಬರೂ ಕತ್ತಿ ಹಿರಿಯುತ್ತಾರೆ)

(ಇಬ್ಬರೂ ರಕ್ಷಕ ಅಧಿಕಾರಿಗಳು ಬರುತ್ತಾರೆ)

ಫೇಬಿಯನ್ : ಸರ್ ಟೋಬಿ, ನಿಲ್ಲಿಸಿ ; ರಕ್ಷಕ ಅಧಿಕಾರಿಗಳು ಬರ್ತಿದ್ದಾರೆ.

ಸರ್ ಟೋಬಿ : (ಆಂಟೋನಿಯೋಗೆ) ಒಂದು ಕ್ಷಣದಲ್ಲಿ ನಿಮ್ಮನ್ನೆದುರಿಸುತ್ತೇನೆ.

(ಅಧಿಕಾರಿಗಳ ಕಣ್ಣಿಗೆ ಬೀಳದಂತೆ ಮರದ ಹಿಂದೆ ಅಡಗುತ್ತಾನೆ)

ವಯೋಲ : (ಸರ್ ಆಂಡ್ರ್ಯೂಗೆ) ಸ್ವಾಮಿ, ನಿಮ್ಮ ಕತ್ತಿಯನ್ನ ಒರೆಗೆ ಸೇರಿಸಿ, ದಯವಿಟ್ಟು

ಸರ್ ಆಂಡ್ರ್ಯೂ : ಹಾಗೇ ಮಾಡ್ತೀನಿ, ಸ್ವಾಮಿ. ನಿಮಗೆ ಮಾತುಕೊಟ್ಟಿದ್ದೆನಲ್ಲ, ಅದನ್ನು ನೆರವೇರಿಸ್ತೀನಿ. (ಕತ್ತಿಯನ್ನು ಒರೆಗೆ ಸೇರಿಸುತ್ತಾನೆ) ಅದು ಸವಾರಿಗೂ ಚೆನ್ನಾಗಿದೆ, ಒಳ್ಳೆ ಹಿಡಿತಕ್ಕೂ ಸಿಕ್ಕತ್ತೆ.

ಮೊದಲ ಅಧಿಕಾರಿ : ಇವನೇ ಆ ಮನುಷ್ಯ, ನಿನ್ನ ಅಧಿಕಾರ ಚಲಾಯಿಸು.

ಎರಡನೇ ಅಧಿಕಾರಿ : ಆಂಟೋನಿಯೋ, ಕೌಂಟ್ ಆರ್ಸಿನೋ ಅವರ ಅಪ್ಪಣೆ ಪ್ರಕಾರ ನಿಮ್ಮನ್ನ ಬಂಧಿಸುತ್ತೇನೆ.

ಆಂಟೋನಿಯೊ : ನನ್ನನ್ನ ನೀವು ಯಾರೋಂತ ತಪ್ಪು ತಿಳಿದಿದ್ದೀರಿ, ಸ್ವಾಮಿ.

ಮೊದಲ ಅಧಿಕಾರಿ : ಸ್ವಾಮಿ, ಸ್ವಲ್ಪವೂ ಇಲ್ಲ ; ನಿಮ್ಮ ತಲೆಯ ಮೇಲಿನ ಟೋಪಿಯಿಲ್ಲದಿದ್ದರೂ ಮುಖಚರ್ಯೆ ಚೆನ್ನಾಗಿಗೊತ್ತು. ಕರೆದೊಯ್ಯಿ. ನನಗವರು ಚೆನ್ನಾಗಿ ಗೊತ್ತೂಂತ ಅವರಿಗೂ ಗೊತ್ತು.

ಆಂಟೋನಿಯೊ : ನಾನು ಅಪ್ಪಣೆ ಪಾಲಿಸಬೇಕು. (ವಯೋಲಳಿಗೆ)
ನಿಮ್ಮನ್ನ ಹುಡುಕಿಕೊಂಡು ಬಂದದ್ದಕ್ಕೆ ಹೀಗಾಯ್ತು.
ಉಪಾಯವಿಲ್ಲ, ಅದನ್ನೆದುರಿಸುತ್ತೇನೆ.
ನೀವೇನು ಮಾಡುತ್ತೀರಿ ? ಅವಶ್ಯಕತೆಯಿಂದಾಗಿ
ನಿಮ್ಮನ್ನ ಹಣದ ಚೀಲ ಕೇಳಬೇಕಾಗಿದೆ ನಾನು.
ನನಗೆ ಒದಗಿರೋ ಗತಿಗಿಂತ ಹೆಚ್ಚಾಗಿ ನಿಮಗೇನೂ
ಮಾಡಲಾರೆನೆಂಬುದೇ ನನ್ನ ವ್ಯಥೆ.
ಬೆರಗಾಗಿದ್ದೀರಿ, ಸಮಾಧಾನ ತಂದುಕೊಳ್ಳಿ.

ಎರಡನೇ ಅಧಿಕಾರಿ : ಬನ್ನಿ ಸ್ವಾಮಿ, ಹೊರಡೋಣ.

ಆಂಟೋನಿಯೊ : ಆ ಹಣದಲ್ಲಿ ಸ್ವಲ್ಪ ಕೊಡಿ, ದಯವಿಟ್ಟು.

ವಯೋಲ : ಯಾವ ಹಣ ಸ್ವಾಮಿ ?
ಇಲ್ಲಿ ನೀವು ನನ್ನ ಬಗ್ಗೆ ತೋರಿದ ವಿಶ್ವಾಸಕ್ಕಾಗಿ,
ಸ್ವಲ್ಪ ಮಟ್ಟಿಗೆ ನಿಮಗೊದಗಿರುವ ಈ ಸ್ಥಿತಿಗಾಗಿ,
ನನಗೆ ಹೆಚ್ಚಿಗೆ ಶಕ್ತಿಯಿಲ್ಲದ್ದರಿಂದ,
ಕೊಂಚ ಹಣವನ್ನು ನೀಡುತ್ತೇನೆ. (ತನ್ನ ಹಣದ ಚೀಲವನ್ನು ತೆಗೆದು)
ನನ್ನ ಬಳಿ ಹೆಚ್ಚಿಲ್ಲ.
ಇರುವುದರಲ್ಲಿ ನಿಮ್ಮೊಡನೆ ಹಂಚಿಕೊಳ್ಳುತ್ತೇನೆ.

ಇಗೋ, ನನ್ನಲ್ಲಿರುವ ಹಣದ ಅರ್ಧಭಾಗ.

(ನಾಣ್ಯಗಳನ್ನು ನೀಡುತ್ತಾನೆ.

ಆಂಟೋನಿಯೊ : (ಅದನ್ನೊಪ್ಪದೆ) ಈಗ ನನ್ನ ತಿಳಿದಿಲ್ಲವೆನ್ನುತ್ತೀರಾ ?
ನನ್ನ ಯೋಗ್ಯತೆ ನಿಮ್ಮ ಕೃತಜ್ಞತೆಯನ್ನ
ಇಷ್ಟು ಕಡಿಮೆ ಮಾಡಲು ಸಾಧ್ಯವೇ ?
ನನ್ನ ದುರವಸ್ಥೆಯನ್ನು ಪರೀಕ್ಷಿಸಬೇಡಿ ;
ಇದು ನಿಮಗೆ ನಾನು ತೋರಿಸಿದ ಉಪಕಾರವನ್ನು ನೆನಪಿಸಿ
ನಿಮ್ಮನ್ನು ದೂರುವಂತಹ ದೃಢ ಮನುಷ್ಯನಾಗಿ ನನ್ನನ್ನು
ಮಾಡಬಹುದು.

ವಯೋಲ : ನನಗಾವ ಉಪಕಾರವೂ ತಿಳಿಯದು.
ನಿಮ್ಮ ಧ್ವನಿ – ರೂಪ ಯಾವುದೂ ನನಗೆ ಪರಿಚಯವಿಲ್ಲ.
ಸುಳ್ಳು, ಡಾಂಭಿಕತೆಗಿಂತ, ಕುಡಿದು ತೊದಲುವುದಕ್ಕಿಂತ,
ನಮ್ಮ ದುರ್ಬಲ ರಕ್ತವನ್ನ ಮಲಿನಗೊಳಿಸುವ
ಯಾವುದೇ ಪಾತಕಕ್ಕಿಂತ ಹೆಚ್ಚಾಗಿ ಮಾನವನ
ಕೃತಘ್ನತೆಯನ್ನು ನಾನು ದ್ವೇಷಿಸುತ್ತೇನೆ.

ಆಂಟೋನಿಯೊ : ಓ ಪರಮಾತ್ಮಾ!

ಎರಡನೇ ಅಧಿಕಾರಿ : ಬನ್ನಿ ಸ್ವಾಮಿ, ದಯವಿಟ್ಟು ಹೋಗೋಣ.

ಆಂಟೋನಿಯೊ : ಸ್ವಲ್ಪ ಮಾತಾಡಬೇಕಾಗಿದೆ ನಾನು. ನೀವಿಲ್ಲಿ ನೋಡಿರುವ ಈ
ಯುವಕರನ್ನು ಯಮನ ದವಡೆಯಿಂದ ಅರ್ಧ
ಪಾರುಮಾಡಿದ್ದೇನೆ. ಅವರನ್ನು ಪವಿತ್ರ ಸ್ನೇಹದಿಂದ ರಕ್ಷಿಸಿದ್ದೇನೆ,
ಅತ್ಯಂತ ಗೌರವಕ್ಕೆ ಪಾತ್ರವೆಂದು ಕಂಡ ಅವರ ರೂಪಕ್ಕೆ ನಾನು ಭಕ್ತಿ
ಸಲ್ಲಿಸಿದ್ದೇನೆ.

ಮೊದಲ ಅಧಿಕಾರಿ : ಅದಕ್ಕೂ ನಮಗೂ ಏನು ಸಂಬಂಧ ? ಹೊತ್ತಾಯಿತು, ನಡೆಯಿರಿ.

ಆಂಟೋನಿಯೊ : ಆದರೆ ಈ ದೇವತೆ ಎಂಥ ಭ್ರಷ್ಟ ಪ್ರತಿಮೆಯಾಗಿದೆ ಈಗ!
ಸೆಬಾಸ್ಟಿಯನ್, ನಿಮ್ಮ ಸುಂದರಕಾರಕ್ಕೆ ಅಪಮಾನಮಾಡಿದ್ದೀರಿ.
ಪ್ರಕೃತಿಯಲ್ಲಿ ಮನಸ್ಸನ್ನುಳಿದು ಕಲಂಕವೇ ಇಲ್ಲ;
ಕ್ರೂರಿಗಳನ್ನುಳಿದು ಮತ್ತಾರೂ ಕುರೂಪಿಗಳಲ್ಲ.

ಸದಾಚಾರವೇ ಚೆಲುವು, ಆದರೆ ಚೆಲುವಾದ ದುಷ್ಟತನ
ಭ್ರಮೆಗೊಳಿಸುವ ಒಳಲೊಟ್ಟೆ ಅಲಂಕಾರ.

ಮೊದಲ ಅಧಿಕಾರಿ: ಇವನು ಹುಚ್ಚಾಗುತ್ತಿದ್ದಾನೆ. ಅವನನ್ನ ಕರೆದೊಯ್ಯಿ. ಬನ್ನಿ ಬನ್ನಿ ಸ್ವಾಮಿ. (ಅವನನ್ನು ಕರೆದೊಯ್ಯುತ್ತಾರೆ)

ಆಂಟೋನಿಯೊ: ಹೊರಡೋಣ, ನಡೆಯಿರಿ.

ವಯೋಲ: ಅವರ ಮಾತುಗಳು ಉದ್ರೇಕದಿಂದ ಸಿಡಿದು
ತಮ್ಮ ನಂಬಿಕೆಯನ್ನು ತೋರಿಸಿದೆ – ಆದರೆ ಅದು
ನಿಜವೆಂದು ತೋರುವುದಿಲ್ಲ ನನಗೆ. ಕಲ್ಪನೆಯೇ, ನಿಜವಾಗು.
ಪ್ರೀತಿಯ ಅಣ್ಣ ನನ್ನನ್ನು ನೀನೆಂದು ಭಾವಿಸಿರವಲಿರು.

ಸರ್ ಟೋಬಿ: (ಮರದ ಹಿಂದಿನಿಂದ ಇಣುಕುತ್ತ) ಇಲ್ಲಿ ಬಾ ನೈಟ್, ಇಲ್ಲಿ ಬಾ. ಫೇಬಿಯನ್, ಋಷಿಗಳ ಮಂತ್ರಗಳೊಂದೆರಡನ್ನು ಗುಣುಗುಟ್ಟೋಣ.

ವಯೋಲ: ಅವರು ಸೆಬಾಸ್ಟಿಯನ್ ಎಂದರು. ಕನ್ನಡಿಯಲ್ಲಿ ನೋಡಿದಾಗ
ನನ್ನಣ್ಣ ಬದುಕುವುದು ಗೊತ್ತು. ಹೀಗೆಯೇ
ನನ್ನಣ್ಣನಾಕಾರವಿದ್ದದ್ದು; ಅವನು ಹೋದದ್ದೂ
ಇದೇ ಉಡುಪು, ಬಣ್ಣ, ಅಲಂಕಾರಗಳಲ್ಲೇ,
ನಾನವನನ್ನು ಅನುಕರಿಸುತ್ತಿದ್ದೇನೆ. ಇದು ನಿಜವಾದರೆ
ಬಿರುಗಾಳಿ ಕರುಣೆ, ಪ್ರೀತಿಯಿಂದಾಗಿ ಉಪ್ಪು ನೀರು ಸಿಹಿ.

(ಹೋಗುತ್ತಾಳೆ).

ಸರ್ ಟೋಬಿ: ತುಂಬ ಅಪ್ರಾಮಾಣಿಕ ನಿಕೃಷ್ಟ ವ್ಯಕ್ತಿ ಇವನು, ಮೊಲಕ್ಕಿಂತ ಪುಕ್ಕಲು. ತನ್ನ ಸ್ನೇಹಿತನನ್ನು ಕಷ್ಟದಲ್ಲಿ ಕೈ ಬಿಟ್ಟಾಗ, ಅವನು ಗೊತ್ತೇ ಇಲ್ಲ ಅಂದದ್ದರಲ್ಲಿ ಅವನ ಅಪ್ರಾಮಾಣಿಕತೆ ಕಾಣ್ತತ್ತೆ. ಇನ್ನು ಅವನ ಪುಕ್ಕಲುತನದ ವಿಷಯ, ಫೇಬಿಯನ್‌ನ ಕೇಳು.

ಫೇಬಿಯನ್: ಪುಕ್ಕಲ, ಅದರಲ್ಲೇ ಭಕ್ತಿ, ಅದೇ ಅವನ ಧರ್ಮ.

ಸರ್ ಟೋಬಿ: ದೇವರ ದಯೆ ಇದ್ದರೆ, ನಾನವನ ಹಿಂದೆ ಹೋಗಿ ಅವನನ್ನು ಬಡಿದು ಹಾಕ್ತೀನಿ.

ಸರ್ ಟೋಬಿ: ಹಾಗೇ ಮಾಡು. ಚೆನ್ನಾಗಿ ಗುದ್ದು, ಆದರೆ ಕತ್ತಿ ಮಾತ್ರ ಹಿರೀಬೇಡ.

ಸರ್ ಆಂಡ್ರ್ಯೂ : ಹಾಗೆ ಹಿರೀದಿದ್ದರೆ – (ಕತ್ತಿ ಹಿರಿದು ವಯೋಲಳ ಹಿಂದೆ ಆತುರವಾಗಿ ಹೋಗುತ್ತಾನೆ)

ಫೇಬಿಯನ್ : ಬನ್ನಿ, ಏನಾಗುತ್ತೋ ನೋಡೋಣ.

ಸರ್ ಟೋಬಿ : ಎಷ್ಟು ಬೇಕಾದ್ರೂ ದುಡ್ಡು ಪಂತಕಟ್ತೀನಿ, ಏನೂ ಆಗಲ್ಲ.

(ಸರ್ ಆಂಡ್ರ್ಯೂವನ್ನು ಹಿಂಬಾಲಿಸುತ್ತಾರೆ)

---------

ನಾಲ್ಕನೇ ಅಂಕ

## ದೃಶ್ಯ ಒಂದು

ಒಲಿವಿಯಳ ಮನೆಯ ಮುಂದಿನ ಚೌಕ

(ಸೆಬಾಸ್ಟಿಯನ್ ಮತ್ತು ನಕಲಿ ಬರುತ್ತಾರೆ)

ನಕಲಿ: ನಿಮ್ಮನ್ನ ಹುಡುಕಿಕೊಂಡು ಬರೋಕೆ ನನ್ನ ಕಳ್ಸಿಲ್ಲ ಅಂತ ನಂಗೇ ಮನವರಿಕೆ ಮಾಡ್ತೀರೇನು?

ಸೆಬಾಸ್ಟಿಯನ್: ಛೆ ಛೆ ನೀನೊಬ್ಬ ಮೂರ್ಖ; ನಿನ್ನಿಂದ ನಾನು ಮುಕ್ತನಾದರೆ ಸಾಕು.

ನಕಲಿ: ನಿಜವಾಗ಼್ೂ ಚೆನ್ನಾಗಿ ಪಟ್ಟುಹಿಡೀತೀರ! ಇಲ್ಲ, ನೀವು ನಂಗೆ ಗೊತ್ತೇ ಇಲ್ಲ, ಏನೋ ಮಾತಾಡೋಕ್ಕೋಸ್ಕರ ನಿಮ್ಮನ್ನು ಕರಕೊಂಡು ಬಾ ಅಂತ ನಮ್ಮ ಒಡತೀ ಹೇಳಿರೋದು ಸುಳ್ಳು! ನಿಮ್ಮ ಹೆಸರು ಮಾಸ್ಟ್ರ ಸಿಸೇರಿಯೋನೂ ಅಲ್ಲ. ಇದು ನನ್ನ ಮೂಗೂ ಅಲ್ಲ. ಯಾವುದೂ ಯಾವುದೂ ಅಲ್ಲ.

ಸೆಬಾಸ್ಟಿಯನ್: ದಯವಿಟ್ಟು, ನಿನ್ನ ಅಬದ್ಧವನ್ನ ಬೇರೆಲ್ಲಾದರೂ ಒದರು, ನಾನು ಯಾರೆಂದು ನಿನಗೆ ತಿಳಿಯದು.

ನಕಲಿ: ಅಪದ್ಧವನ್ನ ಒದರೋದು! ಯಾರೋ ದೊಡ್ಡ ಮನುಷ್ಯರು ಹೇಳಿದ್ದನ್ನು ಕೇಳಿ ಈಗದನ್ನ ಒಬ್ಬ ನಕಲೀಗೆ ಹೇಳ್ತಿದಾರೆ. ಅಪದ್ಧವನ್ನ ಒದರೋದು! ನನಗೆ ಅನ್ಸತ್ತೆ: ಈ ಪ್ರಪಂಚಾನ್ನೋ ದಾಂಡಿಗ ಹುಡುಗ ಹದಗೆಟ್ಟು ಹೋಗ್ತಾನೇ ಅಂತ. ದಯವಿಟ್ಟು ಹೇಳಿ: ಗುರುತಿಲ್ಲ ಅನ್ನೋ ನಾಟಕ ಬಿಟ್ಟು ಒಡತೀರಿಗೆ ಏನು ಒದರ್ಲಿ ಅಂತ. (ಕಣ್ಣುಮಿಟುಕಿಸಿ, ಪಿಸು ಮಾತಿನಿಂದ) ನೀವು ಬರ್ತಿದಿರೀಂತ ಅವರ ಹತ್ರ ಒದರಲೇನು?

ಸೆಬಾಸ್ಟಿಯನ್: ಅಯ್ಯೋ ಕೊಂಗ, ದಯವಿಟ್ಟು ಇಲ್ಲಿಂದ ತೊಲಗು. ಇಗೋ ಬೇಕಾದ್ರೆ ಬಕ್ಷೀಸು. (ಒಂದು ನಾಣ್ಯವನ್ನಿತ್ತು) ಇನ್ನೂ ಉಳಿದರೆ, ಇದಕ್ಕಿಂತ ದೊಡ್ಡ ಬಕ್ಷೀಸು ಕೊಡ್ತೇನೆ.

ನಕಲಿ: ನನ್ನಾಣೆ, ನಿಮ್ಮದು ದೊಡ್ಡ ಕೈ. ನಕಲಿಗಳಿಗೆ ಕಾಸು ಕೊಡೋ ಈ ಅಸಲಿ ಜನಕ್ಕೆ ಒಳ್ಳೆ ಹೆಸರು ಬರುತ್ತೆ — ಕೊಂಡ ಹದಿನಾಲ್ಕು ವರ್ಷವಾದ ಮೇಲೆ.

(ಸರ್ ಆಂಡ್ರ್ಯೂ ಬಿಚ್ಚುಗತ್ತಿ ಹಿಡಿದು ಈ ಚೌಕಕ್ಕೆ ಬರುತ್ತಾನೆ ; ಸರ್ ಟೋಬಿ ಮತ್ತು ಫೇಬಿಯನ್ ಹಿಂಬಾಲಿಸುತ್ತಾರೆ)

ಸರ್ ಆಂಡ್ರ್ಯೂ : ಸ್ವಾಮಿ, ಇನ್ನೊಂದ್ಸಲ ಸಿಕ್ಕಿದಿರಾ ? ಇಗೋ ತಗೊಳ್ಳಿ.

(ಕತ್ತಿಯನ್ನ ಬೀಸುತ್ತಾನೆ)

ಸೆಬಾಸ್ಟಿಯನ್ : (ಮುಷ್ಟಿಗಳಿಂದ ಉತ್ತರಿಸುತ್ತ) ಇಗೋ ತಗೋ, ತಗೋ, ತಗೋ. (ಹೊಡೆದು ಕೆಡವುತ್ತಾನೆ)

ಇಲ್ಲಿನ ಜನಕ್ಕೆಲ್ಲ ಹುಚ್ಚೇನು ! (ತನ್ನ ಕಠಾರಿಯ ಮೇಲೆ ಕೈಯಿಡುತ್ತಾನೆ)

ಸರ್ ಟೋಬಿ : (ಹಿಂದಿನಿಂದ ಅವನ ಕೈಹಿಡಿದು) ನಿಲ್ಲಿ, ಸ್ವಾಮಿ. ಇಲ್ಲಿದ್ರೆ ನಿಮ್ಮ ಕಠಾರೀನ ಮನೆ ಮೇಲೆ ಎಸೀತೀನಿ.

ನಕಲಿ : ಇದನ್ನ ನಾನು ಒಡತೀರಿಗೆ ಹೇಳ್ತೀನಿ. ದುಡ್ಡು ಕೊಡ್ತೀನಿ ಅಂದ್ರೂ ನಿಮ್ಮ ಥರ ಇರಲ್ಲ ನಾನು (ಒಳಗೆ ಹೋಗುತ್ತಾನೆ)

ಸರ್ ಟೋಬಿ : ಎಲ್ಲಿ ಸ್ವಾಮಿ, ಅದನ್ನ ಬಿಡಿ. (ಸೆಬಾಸ್ಟಿಯನ್ ಕೊಸರಿಕೊಳ್ಳುತ್ತಾನೆ)

ಸರ್ ಆಂಡ್ರ್ಯೂ : (ತನಗೆ ಬಿದ್ದಿದ್ದ ಮೂಕ ಪೆಟ್ಟುಗಳನ್ನುಜ್ಜುತ್ತ) ಇಲ್ಲ, ಅವನನ್ನ ಬಿಟ್ಬಿಡು. ಅವನನ್ನ ದಾರಿಗೆ ತರೋಕೆ ಬೇರೆ ಉಪಾಯ ಇದೆ. ಇಲ್ಲೀರಿಯದಲ್ಲಿ ಕಾನೂನು ಅನ್ನೋದಿದ್ರೆ ಅವನ ಮೇಲೆ ಫಿರ್ಯಾದು ಮಾಡ್ತೀನಿ. ನಾನೇ ಅವನ್ನ ಮೊದಲು ಹೊಡ್ದಿರಬಹುದು, ಆದರೆ ತಾನೇ ಏನು ?

ಸೆಬಾಸ್ಟಿಯನ್ : ನಿನ್ನ ಕೈ ಬಿಡು.

ಸರ್ ಟೋಬಿ : ಉಹ್ಞೂ, ನಾನು ಬಿಡೋದಿಲ್ಲ. (ಸರ್ ಆಂಡ್ರ್ಯೂಗೆ) ಎಲ್ಲಿ, ಯುವಕ ಯೋಧರೆ, ನಿಮ್ಮ ಕತ್ತೀನ ಒರೇಲಿಡಿ. ನಿಮಗೆ ಮಾಂಸದ ರುಚಿ ಹತ್ತಿದೆ (ಸೆಬಾಸ್ಟಿಯನ್‌ಗೆ) ಹ್ಞೂ ಬನ್ನಿ.

ಸೆಬಾಸ್ಟಿಯನ್ : ನಿನ್ನಿಂದ ನಾನು ಬಿಡಿಸಿಕೋತಿನಿ, (ಅವನನ್ನು ದೂರ ತಳ್ಳಿ) ಈಗೇನು ಮಾಡುತ್ತೀಯೇ ನೀನು ? ಧೈರ್ಯ ಇದ್ದರೆ ಎದುರಿಸುವುದಕ್ಕೆ, ನಿನ್ನ ಕತ್ತಿ ಹಿರಿ.

ಸರ್ ಟೋಬಿ : ಏನು, ಏನು ! (ತನ್ನ ಕತ್ತಿಯನ್ನು ಹಿರಿದು) ಇಲ್ಲ, ಒಂದೆರಡು ಔನ್ಸು ಉದ್ಧಟತನದ ರಕ್ತ ನಿನ್ನಿಂದ ಸುರಿಸ್ಬೇಕು ನಾನು. (ಹೋರಾಟಕ್ಕೆ ತೊಡಗುತ್ತಾರೆ)

(ಮನೆಯೊಳಗಿಂದ ಒಲಿವಿಯ ಬರುತ್ತಾಳೆ)

ಒಲಿವಿಯ : ನಿಲ್ಲು ಟೋಬಿ ! ನಿನ್ನಾಣೆ, ನಾನು ಹೇಳ್ತಾ ಇದ್ದೀನಿ, ನಿಲ್ಲು.

ಸರ್ ಟೋಬಿ : ಒಡತೀ ! (ಅವರು ದೂರ ಸರಿಯುತ್ತಾರೆ)

ಒಲಿವಿಯ : ಯಾವಾಗಲೂ ಹೀಗೇನೇ, ಅನಾಗರಿಕ ನೀಚ ?
ಬೆಟ್ಟ, ಕಾಡಿನ ಗವಿಗಳಲ್ಲಿರಲು ಲಾಯಕ್ಕು ನೀನು,
ಅಲ್ಲಾದರೆ ಯಾವ ನೀತಿ ನಡತೆಗಳೂ ಇರದು.
ನನ್ನ ನೋಟದಿಂದ ತೊಲಗು ! ಪ್ರಿಯ ಸಿಸೇರಿಯೋ,
ನೊಂದುಕೊಳ್ಳಬೇಡಿ. ಹೊರಟು ಹೋಗು ಬರ್ಬರ !
(ಸರ್ ಟೋಬಿ, ಸರ್ ಆಂಡ್ರ್ಯೂ ಮತ್ತು ಫೇಬಿಯನ್ ಜಾರಿಕೊಳ್ಳುತ್ತಾರೆ).
ನಯವಂತ ಮಿತ್ರ, ಕೇಳಿಕೊಳ್ಳುತ್ತೇನೆ :
ನಿಮ್ಮ ಶಾಂತಿ ಕದಡಿದ ಈ ಅನಾಗರಿಕತೆ ಅನ್ಯಾಯಗಳನ್ನ
ತಾಳಬೇಕಾದ್ದು ವಿವೇಕದಿಂದಲೇ ಹೊರತು ಉದ್ರೇಕದಿಂದಲ್ಲ.
ನಮ್ಮ ಮನೆಗೆ ದಯಮಾಡಿಸಿ : ಈ ಕಿರಾತಕ
ಎಂಥ ವ್ಯರ್ಥ ಕೀಟಲೆಗಳನ್ನು ಮಾಡಿದ್ದಾನೆಂದು ಕೇಳಿದರೆ ಇದರ
ಬಗ್ಗೆ ನಿಮಗೆ ತಮಾಷೆ ಎನಿಸುತ್ತದೆ.
(ಅವನು ಕತ್ತಿಯನ್ನು ಒರೆಗೆ ಸೇರಿಸುತ್ತಾನೆ)

ನೀವು ನನ್ನೊಡನೀಗ ಒಳಗೆ ಬರಲೇಬೇಕು,
ಇಲ್ಲವೆನ್ನಬೇಡಿ. ನನಗಾಗಿ ಅವನನ್ನ ಬಿಟ್ಟುಬಿಡಿ.
ನಿಮ್ಮ ಮೇಲೆ ಕತ್ತಿಯನ್ನೆಳೆದು ಇವನು
ನನ್ನ ಬಡಪಾಯಿ ಹೃದಯವನ್ನೇ ಇರಿದಿದ್ದಾನೆ.

ಸೆಬಾಸ್ಟಿಯನ್ : (ತನ್ನಲ್ಲೇ) ನಾನೇನು ಮಾಡಲಿ ? ಎತ್ತಲೋ ಹರಿಯುತ್ತಿದೆ ಪ್ರವಾಹ !
ನನಗೆ ಹುಚ್ಚು, ಇಲ್ಲವೇ ಇದೊಂದು ಕನಸು.
ಮರವಿನಾಳದಲ್ಲೆ ನನ್ನ ಮನಸ್ಸನ್ನು ಮುಳುಗಿಸಿರಲಿ ಪ್ರೀತಿ.
ಕನಸು ಕಾಣುವುದು ಆಗಿದ್ದರೆ ಇದೇ ರೀತಿ
ನಾನು ಇನ್ನೂ ನಿದ್ರಿಸುವಂತಾಗಲಿ !

ಒಲಿವಿಯ : ದಯವಿಟ್ಟು ಬನ್ನಿ, ಬೇಡುತ್ತೇನೆ ಅಥವಾ
ಆಜ್ಞೆಯನ್ನೇ ಮಾಡಬೇಕೋ !

ಸೆಬಾಸ್ಟಿಯನ್ : ಬರುತ್ತೇನೆ, ದೇವಿ.

ಒಲಿವಿಯ : ಓ ಹಾಗೆ ಹೇಳಿ, ಹಾಗೇ ಮಾಡಿ. (ಒಳಗೆ ಹೋಗುತ್ತಾರೆ)

# ದೃಶ್ಯ ಎರಡು

ಒಲವಿಯಳ ಮನೆಯ ಒಂದು ಕೋಣೆ ; ಹಿಂದೆ ಅದಕ್ಕೆ ಹೊಂದಿಕೊಂಡಂತೆ ಚಿಕ್ಕ ಕೋಣೆ, ಅದಕ್ಕೆ ತೆರೆಯನ್ನು ಹಾಕಿದೆ.

(ವಿದೂಷಕ ಮತ್ತು ಮರೀಯ ಬರುತ್ತಾರೆ, ಮರೀಯಳ ಕೈಯಲ್ಲಿ ಒಂದು ಕುರಿಯ ನಿಲುವಂಗಿ ಮತ್ತು ಕೃತಕ ಗಡ್ಡಗಳಿವೆ)

ಮರೀಯ: ದಯವಿಟ್ಟು ಈ ನಿಲುವಂಗಿ ಗಡ್ಡ ಹಾಕಿಕೊಂಡು ನೀನೇ ಪಾದ್ರಿ ಸರ್ ಟೊಪಾಸ್ ಅಂತ ನಂಬೋ ಹಾಗೆ ಮಾಡು, ಬೇಗ. ಅಷ್ಟರಲ್ಲಿ ನಾನು ಸರ್ ಟೋಬಿಯನ್ನ ನೋಡ್ಕೊಂಡು ಬರ್ತೀನಿ. (ಹೋಗುವಳು)

ನಕಲಿ: ಸರಿ, ನಾನು ಇವನ್ನು ಹಾಕ್ಕೊಂಡು ಮರೆಯಾಗಿ ಬಿಡ್ತೀನಿ. ಇಂಥ ನಿಲುವಂಗಿ ಹಾಕ್ಕೊಂಡು ಮೆರೆದೋರ ಪೈಕಿ ನಾನೇ ಮೊದಲನೆಯವನಾಗಿದ್ರೆ ಎಷ್ಟು ಚೆನ್ನಾಗಿರತ್ತೆ ! (ನಿಲುವಂಗಿ ಹಾಕಿಕೊಂಡು ಗಡ್ಡವನ್ನು ಅಂಟಿಸಿಕೊಳ್ಳುತ್ತಾನೆ) ಈ ಕೆಲಸ ಮಾಡೋದಕ್ಕೆ ನಾನು ಸಾಕಷ್ಟು ಉದ್ದ ಇಲ್ಲ, ಅಥವಾ ವಿದ್ವಾಂಸನಾಗಿ ಕಾಣೋ ಅಷ್ಟು ಸಣ್ಣಗೂ ಇಲ್ಲ. ಆದರೆ ಪ್ರಾಮಾಣಿಕ, ಒಳ್ಳೆ ಮನೆ ಯಜಮಾನ ಅಂತ ಅನ್ನಿಸಿಕೊಂಡರೆ ಎಚ್ಚರಿಕೆ ಮನುಷ್ಯ, ದೊಡ್ಡ ವಿದ್ವಾಂಸ ಅಂತ ಅನ್ನಿಸಿಕೊಂಡ ಹಾಗೇನೇ. ಪಾಲುದಾರರು ಬರ್ತಿದಾರೆ.

(ಮರೀಯಳು ಸರ್ ಟೋಬಿಯೊಂದಿಗೆ ಬರುತ್ತಾಳೆ)

ಸರ್ ಟೋಬಿ: ದೇವರು ಒಳ್ಳೇದು ಮಾಡಲಿ, ಮಾಸ್ಟರ್ ಪಾರ್ಸನ್.

ನಕಲಿ: (ಕೃತಕವಾದ ಧ್ವನಿಯಲ್ಲಿ) ''ಶುಭಂ ಭೂಯಾತ್'' ಸರ್ ಟೋಬಿ. ಲೇಖನಿ-ಮಸಿಗಳನ್ನೇ ಕಾಣದ ಪ್ರಾಗ್‌ನ ಮುದಿ ಸಾಧು ಗಾರ್ಬೊಡಕ್ ದೊರೆ ಸೊಸೇಗೆ ತುಂಬ ಧ್ವನಿಪೂರ್ಣವಾಗಿ ಹೇಳಿದಂತೆ ''ಅದು ಯಾವುದೋ ಅದೇ ಆಗಿದೆ.'' ಆದ್ದರಿಂದ ನಾನು ಮಾಸ್ಟರ್ ಪಾರ್ಸನ್ ಆಗಿರೋದರಿಂದ ಮಾಸ್ಟರ್ ಪಾರ್ಸನ್ನೇ ಆಗಿದ್ದೇನೆ. ಏಕೆಂದರೆ, ''ಅದು'' ಅದಲ್ಲದೆ ಮತ್ತೇನು ? ''ಆಗಿರುವುದು'' ಆಗಿರೋದಲ್ಲದೆ ಇನ್ನೇನು ?

ಸರ್ ಟೋಬಿ: ಅವರಿಗೆ ಆಶೀರ್ವಾದ ಮಾಡಿ, ಸರ್ ಟೊಪಾಸ್.

ನಕಲಿ: (ತೆರೆಯ ಬಳಿ ಬಂದು) ಏನು, ಅಯ್ಯ, ಈ ಸೆರೆಮನೇಲಿ

ಶಾಂತಿಯಿರಲಿ.

ಸರ್ ಟೋಬಿ: (ತನ್ನಲ್ಲಿ) ಈ ಠಕ್ಕ ಚೆನ್ನಾಗಿ ಅನುಕರಿಸ್ತಾನೆ, ಒಳ್ಳೇ ಠಕ್ಕ.

ಮಾಲ್ವೋಲಿಯೊ: (ಸಣ್ಣ ಕೋಣೆಯೊಳಗಿಂದ) ಯಾರು ಕೂಗ್ತಿರೋದು?

ನಕಲಿ: ಪಾದ್ರಿ ಸರ್ ಟೊಪಾಸ್. ಹುಚ್ಚು ಮಾಲ್ವೋಲಿಯೋನ ಕಾಣಲು ಬಂದಿದ್ದೇನೆ.

ಮಾಲ್ವೋಲಿಯೊ: ಸರ್ ಟೊಪಾಸ್, ಸರ್ ಟೊಪಾಸ್. ದಯವಿಟ್ಟು ನಮ್ಮ ಒಡತೀರ ಹತ್ರ ಹೋಗಿ.

ನಕಲಿ: ಏ ಅತಿಶಯೋಕ್ತಿ ಭೂತವೇ, ತೊಲಗು ಇಲ್ಲಿಂದ! ಈ ಮನುಷ್ಯನ್ನ ಎಷ್ಟೊಂತ ಕಾಡ್ತೀಯ. ಒಡತೀರ ವಿಷಯ ಬಿಟ್ಟು ಬೇರೆ ಮಾತಿಲ್ವೆ ನಿಂಗೆ?

ಸರ್ ಟೋಬಿ: ಸರಿಯಾಗಿ ಹೇಳಿದ್ರಿ, ಮಾಸ್ಟರ್ ಪಾರ್ಸನ್.

ಮಾಲ್ವೋಲಿಯೊ: ಸರ್ ಟೊಪಾಸ್. ಯಾರಿಗೂ ಇದಕ್ಕಿಂತ ಹೆಚ್ಚು ಅನ್ಯಾಯ ಆದ ಹಾಗೆ ಕಾಣಿಸೋಲ್ಲ. ಸಭ್ಯ ಸರ್ ಟೋಪಾಸ್ ಅವರೆ, ನನ್ನನ್ನ ಹುಚ್ಚ ಅಂತ ಭಾವಿಸ್ಬೇಡಿ. ಅವ್ರೆಲ್ಲ ಸೇರಿ ನನ್ನ ಈ ಘೋರವಾದ ಕತ್ತಲೇಲಿ ಸೇರಿಸಿಬಿಟ್ಟಿದ್ದಾರೆ.

ನಕಲಿ: ಥೂ ಸುಳ್ಳು ಸೈತಾನ! ನಾನು ನಿನ್ನನ್ನ ಅತ್ಯಂತ ಗಂಭೀರವಾಗಿಯೇ ಕರೀತೇನೆ, ಏಕೆಂದರೆ ದೆವ್ವವನ್ನೂ ತುಂಬ ನಯವಾಗಿ ಕಾಣುವಂಥ ಅತ್ಯಂತ ದಯಾವಂತರಲ್ಲಿ ನಾನೂ ಒಬ್ಬ. ಆ ಮನೆ ಕತ್ತಲಾಗಿದೆ ಅಂತ ಹೇಳ್ತಿದ್ದೀಯಲ್ಲವೇ?

ಮಾಲ್ವೊಲಿಯೊ: ಹೌದು, ನರಕದ ಹಾಗಿದೆ, ಸರ್ ಟೊಪಾಸ್.

ನಕಲಿ: ಅದೇಕೆ, ಅಡ್ಡಗಟ್ಟೆ ಹಾಗೆ ಪಾರದರ್ಶಕವಾಗಿರೋ ಉತ್ತರ-ದಕ್ಷಿಣವಾಗಿರೋ ಗವಾಕ್ಷಿಗಳು ಕರೀ ಮರದ ಹಾಗೇ ಹೊಳೀತಿವೆ. ಇಷ್ಟಾದರೂ ಬೆಳಕು ಬರೋಲ್ಲ ಅಂತ ದೂರ್‍ತಿದ್ದೀಯಲ್ಲ.

ಮಾಲ್ವೊಲಿಯೊ: ನಾನು ಹುಚ್ಚನಲ್ಲ, ಸರ್ ಟೊಪಾಸ್. ನಿಜವಾಗ಼್ಲೂ ಹೇಳ್ತಿದ್ದೀನಿ - ಇದು ಕತ್ತಲು ಕೋಣೆ.

ನಕಲಿ: ಹುಚ್ಚ, ನೀನು ಸುಳ್ಳು ಹೇಳ್ತಿದ್ದೀ: ನಾನು ಹೇಳ್ತೀನಿ, ಅಲ್ಲಿ ಕತ್ತಲಿಲ್ಲ,

ಅಜ್ಞಾನವಿದೆ ; ಅದರಲ್ಲಿ ಸೇರ್ಕೊಂಡು ಈಜಿಪ್ಟಿನೋರು ಮಂಜಲ್ಲಿ ಒದ್ದಾಡ್ಡೋ ಹಾಗೆ ನೀನು ಒದ್ದಾಡ್ತಾ ಇದೀಯ.

ಮಾಲ್ವೋಲಿಯೊ : ಈ ಕೋಣೆ ಅಜ್ಞಾನದಷ್ಟೇ ಕತ್ತಲಾಗಿದೆ, ಅಜ್ಞಾನ ನರಕದಂತೆ ಕಗ್ಗತ್ತಲು. ಹೀಗೆ ಯಾವ ಮನುಷ್ಯನನ್ನೂ ಅನ್ಯಾಯಕ್ಕೆ ಒಳಗು ಮಾಡಿರ್ಲಿಲ್ಲ. ನನಗೆ ನಿಮಗಿಂತ ಹೆಚ್ಚೇನೂ ಹುಚ್ಚಿಲ್ಲ - ಅದನ್ನ ಎಂಥ ಗಟ್ಟಿ ಪ್ರಶ್ನೆ ಬೇಕಾದ್ರೂ ಕೇಳಿ ಪರೀಕ್ಷೆ ಮಾಡಿ.

ನಕಲಿ : ಕಾಡುಕೋಳಿ ಬಗ್ಗೆ ಪೈಥಾಗೊರಾಸ್ ಏನು ಹೇಳಿದ್ದಾನೆ ?

ಮಾಲ್ವೋಲಿಯೊ : ನಮ್ಮ ಅಜ್ಜಿ ಅಂಥ ಆತ್ಮ ಒಂದು ಪಕ್ಷೀಲಿ ಸೇರೋ ಸಂಭವ ಇದೇಂತ.

ನಕಲಿ : ಅವನ ಅಭಿಪ್ರಾಯದ ಬಗ್ಗೆ ನಿಂಗೇನು ಅನ್ಸತ್ತೆ ?

ಮಾಲ್ವೋಲಿಯೊ : ಆತ್ಮ ದೊಡ್ಡದು ಅಂತ ನನ್ನ ಭಾವನೆ ; ಅವನ ಅಭಿಪ್ರಾಯವನ್ನ ಒಪ್ಪೋದಕ್ಕೆ ಸಾಧ್ಯವೇ ಇಲ್ಲ.

ನಕಲಿ : ಒಳ್ಳೇದು. ನಾನು ಹೊರಡ್ತೀನಿ. ನೀನಿನ್ನೂ ಕತ್ತಲೇಲೇ ಉಳಿದಿರಬೇಕು. ನೀನು ಪೈಥಾಗೋರಾಸ್‌ನ ಅಭಿಪ್ರಾಯಾನ ಒಪ್ಪಬೇಕು, ನಿನ್ನ ಅಜ್ಜಿ ಆತ್ಮಕ್ಕೆ ತೊಂದರೆಯಾಗುತ್ತೇಂತ ಕಾಡುಕೋಳಿನ ಕೊಲ್ಲಕ್ಕೆ ಹೆದರ್ಕೋಬೇಕು, ಆಗ ನಾನು ನಿಂಗೆ ಬುದ್ಧಿ ಸರಿಯಾಗಿದೇಂತ ಒಪ್ತೀನಿ. (ತೆರೆಯಿಂದ ಒಂದಕ್ಕೆ ಬರುತ್ತಾನೆ)

ಮಾಲ್ವೋಲಿಯೊ : (ಕೂಗುತ್ತಾನೆ) ಸರ್ ಟೊಪಾಸ್, ಸರ್ ಟೊಪಾಸ್.

ಸರ್ ಟೋಬಿ : ತುಂಬ ಮನೋಜ್ಞ ಸರ್ ಟೊಪಾಸ್ !

ನಕಲಿ : ನಿಜವಾಗಿ, ನಾನು ಎಂಥ ನೀರಲ್ಲಿ ಬೇಕಾದ್ರೂ ಇಳೀಬಲ್ಲೆ.

(ತನ್ನ ವೇಷವನ್ನು ತೆಗೆಯುತ್ತಾನೆ)

ಮರೀಯ : ಈ ನಿಲುವಂಗಿ - ಗಡ್ಡ ಇಲ್ದೇನೇ ನೀನಿದನ್ನ ಮಾಡಬಹುದಾಗಿತ್ತು - ನೀನು ಅವನಿಗೆ ಕಾಣಿಸ್ತಿರಲಿಲ್ಲ.

ಸರ್ ಟೋಬಿ : ಈಗ ನಿನ್ನ ಧ್ವನೀಲೇ ಅವನ ಹತ್ತಿರ ಹೋಗು ; ಅವನು ಹೇಗೆ ಕಾಣಿಸ್ತಾನೇಂತ ಬಂದು ಹೇಳು. (ಮರೀಯಳಿಗೆ) ಈ ನಾಟಕ ನಿಲ್ಲಿಸಿದರೆ ಸಾಕೂಂತ ನನಗನ್ನಿಸುತ್ತೆ. ಅವನನ್ನ ಸಂದರ್ಭ ನೋಡಿ ಬಿಡೋದು ಒಳ್ಳೇದು ಅಂತ ನನ್ನ ಭಾವನೆ. ಯಾಕೇಂದ್ರ, ನನ್ನ

ಸೊಸೇಗೆ ಎಷ್ಟು ಅಪಚಾರ ಮಾಡ್ಬಿಟ್ಟಿದೀನಿ ಅಂದರೆ ತೊಂದ್ರೆ ಇಲ್ದೆ ಇದನ್ನ ಕೊನೇ ಮುಟ್ಟಿಸೋದು ನನಗೆ ಸಾಧ್ಯವಿಲ್ಲ. ಹೋಗ್ತಾ ನನ್ನ ಕೊಠಡಿ ಹತ್ರ ಬಂದು ಹೋಗು. (ಸರ್ ಟೋಬಿ ಮತ್ತು ಮರೀಯ ಬೇರೆ ಬೇರೆ ಬಾಗಿಲುಗಳ ಮೂಲಕ ಹೋಗುತ್ತಾರೆ)

ನಕಲಿ: (ಹಾಡುತ್ತಾನೆ) ''ಹೇ ರಾಬಿನ್, ಖುಷಿ ರಾಬಿನ್, ನಿನ್ನ ಒಡತಿ ಹೇಗಿದಾಳೆ ನಂಗೇ ಹೇಳು.''

ಮಾಲ್ವೋಲಿಯೊ: ನಕಲಿ —

ನಕಲಿ: (ಹಾಡುತ್ತಾನೆ) ''ನನ್ನ ಒಡತಿ, ನಿಜವಾಗಿ ನಿರ್ದಯಳು''

ಮಾಲ್ವೋಲಿಯೊ: ನಕಲಿ –

ನಕಲಿ: (ಹಾಡುತ್ತಾನೆ) ''ಬೇರೆ ಒಬ್ಬನಿಗೆ ಅವಳು ಒಲಿದಿಹಳು.'' ಅಕ್ಷ ಯಾರು ಕೂಗೋದು ?

ಮಾಲ್ವೋಲಿಯೊ: ಅಣ್ಣ ನಕಲಿ, ನಿಂಗೆ ಯಾವತ್ತಾದ್ರೂ ನನ್ನಿಂದ ಒಳ್ಳೇದಾಗಬೇಕೂಂದ್ರೆ ನಂಗೊಂದು ಮೇಣದ ಬತ್ತಿ, ಒಂದು ಲೇಖನಿ, ಶಾಯಿ, ಸ್ವಲ್ಪ ಕಾಗದ ತಂದುಕೊಡು. ನಾನು ಮರ್ಯಾದಸ್ಥ, ಅದಕ್ಕೋಸ್ಕರ ನಿಂಗೆ ತುಂಬ ಋಣಿಯಾಗಿರ್ತೀನಿ.

ನಕಲಿ: ಸ್ವಾಮಿ ಮಾಲ್ವೋಲಿಯೋ!

ಮಾಲ್ವೋಲಿಯೊ: ಹೌದಪ್ಪ, ನಕಲಿ.

ನಕಲಿ: ಅಯ್ಯೋ ಸ್ವಾಮಿ, ನೀವು ಬುದ್ಧಿ ಕಳಕೊಂಡಿದ್ದು ಹೇಗೆ ?

ಮಾಲ್ವೋಲಿಯೊ: ನಕಲಿ, ಇಷ್ಟೊಂದು ಅನ್ಯಾಯಾನ ಯಾರು ಯಾರ್ಗೂ ಮಾಡಿರ್ಲಿಲ್ಲ. ನನ್ನ ಬುದ್ಧಿ ನೆಟ್ಟಗೇ ಇದೆಯಪ್ಪ – ನಿನ್ನದರ ಹಾಗೇನೇ.

ನಕಲಿ: ಬರೀ ನನ್ನದರ ಹಾಗೇನಾ ? ನಿಮ್ಮ ಬುದ್ಧಿ ನಕಲಿ ಬುದ್ಧಿಗಿಂತ ಮೇಲಾಗಿಲ್ಲದಿದ್ರೆ, ನಿಮಗೆ ಖಂಡಿತ ಹುಚ್ಚು ಅಂತಾನೇ.

ಮಾಲ್ವೋಲಿಯೊ: ಇಲ್ಲಿ ಒಂದು ವಸ್ತು ಎಸೆಯೋ ಹಾಗೇ ನನ್ನ ಎಸ್ದಿದಾರೆ. ಈ ಕತ್ತಲಲ್ಲಿ ಕೂಡಿಹಾಕಿ ಪಾದ್ರಿಗಳನ್ನ, ಕತ್ತೆಗಳನ್ನ ಕಳಿಸಿ ನನ್ನ ಬುದ್ಧಿಕಳೆಯೋದಕ್ಕೆ ಎಷ್ಟುಬೇಕೋ ಅಷ್ಟೂ ಮಾಡ್ತಿದಾರೆ.

ನಕಲಿ : ಏನು ಹೇಳಿದ್ರೂ ಜಾಗ್ರತೆಯಾಗಿರಿ, ಪಾದ್ರಿಗಳು ಇಲ್ಲೇ ಇದಾರೆ. (ತನ್ನ ಧ್ವನಿಯನ್ನು ಬದಲಾಯಿಸಿ) ಮಾಲ್ವೋಲಿಯೋ, ಮಾಲ್ವೋಲಿಯೋ, ದೇವರು ನಿನ್ನ ಕೆಟ್ಟ ಬುದ್ಧಿನ ಸರಿಮಾಡಲಿ! ಸ್ವಲ್ಪ ನಿದ್ದೆ ಮಾಡೋಕೆ ಪ್ರಯತ್ನ ಮಾಡು. ನಿನ್ನ ಈ ಗೊಡ್ಡು ಹರಟೆಯನ್ನು ನಿಲ್ಲಿಸು.

ಮಾಲ್ವೋಲಿಯೊ : ಸರ್ ಟೊಪಾಸ್ —

ನಕಲಿ : (ಧ್ವನಿ ಬದಲಾಯಿಸಿ) ಅಯ್ಯಾ ನೀನು ಅವನ ಜೊತೆ ಯಾವ ಮಾತನ್ನು ಆಡಬೇಡ. (ತನ್ನ ಧ್ವನಿಯಲ್ಲಿ) ನಾನೇ ಸ್ವಾಮಿ, ಇಲ್ಲ ಸ್ವಾಮಿ ಇಲ್ಲ, ಹೋಗಿ ಬರ್ತೀರಾ ಸರ್ ಟೊಪಾಸ್ ಒಳ್ಳೇದು, ದೇವ್ರು ಒಳ್ಳೇದು ಮಾಡಲಿ. ಅಮೆನ್ – ಹಾಗೇ ಮಾಡ್ತೀನಿ ಸ್ವಾಮಿ, ಆಗಲಿ.

ಮಾಲ್ವೋಲಿಯೊ : ನಕಲಿ, ನಕಲಿ, ನಕಲಿ, ನನ್ನ ಮಾತು –

ನಕಲಿ : ಅಯ್ಯೋ ಸ್ವಾಮಿ, ಸ್ವಲ್ಪ ತಾಳ್ಮೆಯಿಂದಿರಿ. ಏನು ಸ್ವಾಮಿ ನೀವು ಹೇಳೋದು? ನಿಮ್ಮ ಜೊತೇಲಿ ಮಾತಾಡಿದ್ದಕ್ಕೆ ನಾನು ಬೈಸಿಕೊಂಡೆ.

ಮಾಲ್ವೋಲಿಯೊ : ನೀನು ತುಂಬಾ ಒಳ್ಳೆಯವನು, ನಕಲಿ. ಸ್ವಲ್ಪ ದೀಪ ಕಾಗದ ತಂದ್ಕೊಡು. ನಾನು ಹೇಳ್ತಿದೀನಿ : ಇಲ್ಲೀರಿಯದ ಬೇರೆ ಯಾರಿಗಿಂತ್ಲೂ ನನ್ನ ಬುದ್ಧಿ ನೆಟ್ಟಗಿದೆ ಕಣಪ್ಪ.

ನಕಲಿ : ಹಾಗೇ ಇರ್ಬೇಕಾಗಿತ್ತು, ಪಾಪ!

ಮಾಲ್ವೋಲಿಯೊ : ಈ ಕೈಮೇಲೆ ಆಣೆ, ನಾನು — ಅಯ್ಯ ನಕಲಿ, ಸ್ವಲ್ಪ ಮಸಿ ಕಾಗದ ದೀಪ ಕೊಡು. ನಾನು ಬರೆಯೋ ಕಾಗದಾನ ಒಡತೀರಿಗೆ ತಲುಪಿಸಿಬಿಡು. ಬೇರೆ ಯಾವ ಕಾಗದ ತೆಗೆದುಕೊಂಡು ಹೋದೋನಿಗಿಂತ ಇದರಿಂದ ನಿಂಗೆ ಪ್ರಯೋಜನ ಹೆಚ್ಚು ಸಿಕ್ತತ್ತೆ.

ನಕಲಿ : ಅಷ್ಟನ್ನ ಮಾಡ್ತೀನಿ ಆದ್ರೆ ನಿಮಗೆ ನಿಜವಾಗ್ಲೂ ಹುಚ್ಚು ಹಿಡಿದಿಲ್ಲವಾ? ಅಥವಾ ಬರೀ ನಟನೆ ಮಾಡ್ತಿದೀರೋ?

ಮಾಲ್ವೋಲಿಯೊ : ನನ್ನ ನಂಬು – ನಂಗೆ ಯಾವ ಹುಚ್ಚು ಇಲ್ಲ – ನಿಜ ಹೇಳ್ತಿದೀನಿ.

ನಕಲಿ : ಉಹ್ಲೂ, ಯಾವ ಹುಚ್ಚನನ್ನೂ ಅವನ ಮೆದುಳು ನೋಡೋಕೆ ಮುಂಚೆ ಬುದ್ಧಿ ನೆಟ್ಟಗಿರೋನು ಅಂತ ನಂಬಲಾರೆ. ಕಾಗದ, ಮಸಿ, ದೀಪಾನ ತಂದ್ಕೊಡ್ತೀನಿ.

ಮಾಲ್ವೋಲಿಯೊ: ನಕಲಿ, ಇದಕ್ಕೆ ಪ್ರತಿಯಾಗಿ ನಿಂಗೆ ತುಂಬ ದೊಡ್ಡ ಉಪಕಾರ ಮಾಡ್ತೀನಪ್ಪ. ದಯವಿಟ್ಟು ಹೋಗಿ ತಗೊಂಡು ಬಾ.

ನಕಲಿ: (ಕೋಣೆಯಿಂದ ಹಾಡುತ್ತ ಕುಣಿಯುತ್ತ ಹೋಗುತ್ತಾನೆ)

ಹೊರಟೆ ಸ್ವಾಮಿ ಹೊರಟೆ
ನಾನು ಹೊರಟೆ ಈಗಲೇ;

ಮತ್ತೆ ನಿಮ್ಮ ಬಳಿಗೆ ಬರುವೆ
ಒಂದು ಕ್ಷಣದಲೇ.

ಹಳೇ ಕಾವ್ಯದ್ ನಕಲಿ ಹಾಗೆ
ನಿಮ್ಮ ಸಮಯಕಾಗೆ,

ಕೈಲಿ ಕತ್ತಿ ಗದೇ ಹಿಡಿದು
ಕೋಪದಿಂದ ನೆಲಕೆ ಬಡಿದು

ದೆವ್ವ ಹೆದರೋ ಹಾಗೆ!
ಹುಚ್ಚು ಹಿಡಿದ ಹುಡುಗನಂತೆ

'ಉಗುರು ಹೆರೆದು ನಿಂತೆ'
ಹೋಗಿ ಬರುವೆ, ಇಂತೆ!

## ದೃಶ್ಯ ಮೂರು

ಒಲಿವಿಯಳ ಮನೆಯ ಉದ್ಯಾನ

(ಸೆಬಾಸ್ಟಿಯನ್ ಮನೆಯೊಳಗಿನಿಂದ ಬರುತ್ತಾನೆ)

ಸೆಬಾಸ್ಟಿಯನ್: ಇದು ಗಾಳಿ, ಅದು ಉಜ್ವಲ ಸೂರ್ಯಕಾಂತಿ,
ಇದು ಅವರಿತ್ತ ಮುತ್ತು. ಇವನ್ನ ಕಾಣಬಲ್ಲೆ, ಮುಟ್ಟಬಲ್ಲೆ.
ನನ್ನನ್ನ ಈ ರೀತಿ ಆವರಿಸಿರುವುದು ಬೆರಗಾದರೂ
ಹುಚ್ಚುತನವಲ್ಲ, ಹಾಗಾದರೆ ಆಂಟೋನಿಯೋ ಎಲ್ಲಿ?
ನಾನು 'ಎಲಿಫೆಂಟ್'ಗೆ ಹೋದಾಗ ಸಿಗಲಿಲ್ಲ ಅವರು;
ಆದರೂ ಅವರಿಲ್ಲಿ ಬಂದಿದ್ದರು. ಅಲ್ಲಿ ತಿಳಿಯಿತು ನನಗೆ
ನನಗಾಗಿ ಊರೆಲ್ಲ ಸುತ್ತಾಡಿ ಹುಡುಕಿದರು ಎಂದು.

ಈಗವರ ಹಿತವಚನ ಚೆನ್ನದಂತೆ ನನ್ನ ನೆರವಿಗೆ ಬರಬಹುದು.
ಇದೊಂದು ಪ್ರಮಾದವಿರಬಹುದು, ಆದರೆ ಹುಚ್ಚಲ್ಲ
ಎಂದು ಮನಸ್ಸು ಬುದ್ಧಿಯ ಜೊತೆ ವಾದಿಸಿದರೂ
ಆ ಆಕಸ್ಮಿಕ – ಅದೃಷ್ಟಪ್ರವಾಹಗಳು
ಹಿಂದಿನೆಲ್ಲ ಸಂಗತಿಯ ವಿಚಾರವನ್ನ
ಎಷ್ಟು ಮೀರಿಸಿದ್ದೆಂದರೆ ನನ್ನ ಕಣ್ಣನ್ನು ನಾನೇ ನಂಬದಂತೆ,
ನನ್ನ ವೈಚಾರಿಕತೆಯೊಡನೆ ಹೋರಾಡುವಂತೆ ಮಾಡಿದೆ ;
ನನಗೇ ಹುಚ್ಚಿರಬೇಕು ಅಥವಾ ಈ ಹೆಣ್ಣಿಗೇ ಎಂಬುದನ್ನ
ಬಿಟ್ಟು ಮತ್ತಾವುದನ್ನಾದರೂ ನಂಬದಂತಾಗಿದೆ.
ಆದರೆ ಆಕೆಗೆ ಹುಚ್ಚಾದರೆ ತನ್ನ ಮನೆಯನ್ನಾಳಲು,
ಸೇವಕರಿಗೆ ಆಜ್ಞೆ ಮಾಡಲು, ಸರಾಗ – ಜಾಗರೂಕತೆ –
ಗಂಭೀರ ನಿಲುವುಗಳಿಂದ ಮನೆಕೆಲಸಗಳನ್ನ
ಹೊಣೆಹೊತ್ತು ನಡೆಸಲು ಸಾಧ್ಯವಾಗುತ್ತಿರಲಿಲ್ಲ.
ಆದರೂ ಏನೋ ಗಲಿಬಿಲಿಯಾದಂತೆ ತೋರುತಿದೆ,
ಅದೋ ಆ ಮಹಿಳೆಯೇ ಬರುತ್ತಿದ್ದಾಳೆ.
(ಒಲಿವಿಯಳು ಪುರೋಹಿತನೊಡನೆ ಬರುತ್ತಾಳೆ)

ಒಲಿವಿಯ : ಈ ನನ್ನ ಅವಸರಕ್ಕೆ ದೂಷಿಸಬೇಡಿ.
ಸರಿಯೆನಿಸಿದರೆ, ನನ್ನ ಮತ್ತು ಈ ಪುರೋಹಿತರೊಡನೆ
ಹತ್ತಿರದ ಚರ್ಚಿಗೆ ನಡಿಯಿರಿ. ಅಲ್ಲಿ,
ಇವರೆದುರು, ಅದರ ಪವಿತ್ರ ಸೂರಿನಡಿಯಲ್ಲಿ,
ನಿಮ್ಮ ನಚ್ಚಿಕೆಯ ಆಶ್ವಾಸನೆಯನ್ನ ತುಂಬಿ ನನ್ನಲ್ಲಿ.
ಆಗ ಅನಿಶ್ಚಿತತೆ – ಸಂದೇಹಗಳಿಂದ ಕೂಡಿದ
ಈ ನನ್ನ ಹೃದಯಕ್ಕೆ ಶಾಂತಿಯೊದಗುವುದು.
ಇದು ಎಂದು ಪ್ರಕಟಗೊಳ್ಳಬಹುದೆನಿಸುವುದೋ
ಅಂದಿನವರೆಗೆ ಇವರಿದನ್ನು ಗುಟ್ಟಾಗಿ ಇರಿಸುತ್ತಾರೆ.
ಆಮೇಲೆ ನನ್ನ ಸ್ಥಾನಮಾನಗಳಿಗನುಗುಣವಾಗಿ
ಇದನ್ನಾಚರಿಸೋಣ. ಏನನ್ನುವಿರಿ ನೀವು ?

ಸೆಬಾಸ್ಟಿಯನ್ : ಈ ಪವಿತ್ರ ವ್ಯಕ್ತಿಯ ಹಿಂದೆ ನಿಮ್ಮೊಡನೆ ಬರುತ್ತೇನೆ.
ನಿಷ್ಠೆಯಿಂದಿರುವೆನೆಂದು ಪ್ರತಿಜ್ಞೆ ಮಾಡಿ,

ಎಂದಿಗೂ ಹಾಗೆಯೇ ಇರುತ್ತೇನೆ ನಾನು.

ಒಲಿವಿಯ : ಹಾಗಾದರೆ, ಮುಂದೆ ನಡೆಯಿರಿ, ಪೂಜ್ಯರೇ ;
ಆಕಾಶವು ಬೆಳಗಿ ನನ್ನ ಈ ಕೃತ್ಯವನ್ನು
ಚೆನ್ನಾಗಿ ಕಾಣುವಂತಾಗಲಿ.

(ಅವರು ಹೋಗುತ್ತಾರೆ)

---------

ಐದನೆಯ ಅಂಕ

## ದೃಶ್ಯ ಒಂದು

ಒಲವಿಯಳ ಮನೆಯ ಮುಂದಿನ ಚೌಕ
(ನಕಲಿ ಮತ್ತು ಫೇಬಿಯನ್ ಬರುತ್ತಾರೆ)

ಫೇಬಿಯನ್ : ನಿಂಗೆ ನನ್ಮೇಲೆ ತುಂಬ ಸ್ನೇಹಾ ಅಲ್ಲವಾ ? ಎಲ್ಲಿ ಅವನ ಕಾಗದ ನೋಡೋಣ.

ನಕಲಿ : ಸ್ವಾಮಿ ಫೇಬಿಯನ್ ಮಹಾರಾಯರೇ, ನನ್ನದೊಂದು ಪ್ರಾರ್ಥನೆ ನಡೆಸಿಕೊಡಿ.

ಫೇಬಿಯನ್ : ಏನು ಬೇಕಾದರೂ ಕೇಳು.

ನಕಲಿ : ಹಾಗಾದ್ರೆ, ಈ ಕಾಗದ ನೋಡಬೇಕೂಂತ ಕೇಳಬೇಡಿ.

ಫೇಬಿಯನ್ : ಒಂದು ನಾಯೀನ ಕೊಟ್ಟು, ಅದಕ್ಕೆ ಬದಲು ಅದೇ ನಾಯನ್ನ ಕೇಳಿದ ಹಾಗಿದೆ ನಿನ್ನ ಮಾತು.

(ಡ್ಯೂಕ್, ಸಿಸೇರಿಯೋ ವೇಷದ ವಯೋಲ, ಪರಿವಾರದವರು ಆ ಚೌಕದೆಡೆಗೆ ಬರುತ್ತಾರೆ)

ಡ್ಯೂಕ್ : ಸ್ನೇಹಿತರೇ ನೀವು ಒಡತಿ ಒಲಿವಿಯ ಕಡೆಯವರೇ ?

ನಕಲಿ : ಹೌದು. ಸ್ವಾಮಿ, ನಾವು ಅವರ ಕಡೆಯ ಕೆಲವು ಉಪಕರಣಗಳು.

ಡ್ಯೂಕ್ : ನೀನು ನನಗೆ ಚೆನ್ನಾಗಿ ಗೊತ್ತು. ಹೇಗಿದ್ದೀಯಪ್ಪ ಅಣ್ಣಾ ?

ನಕಲಿ : ಇದ್ದೀನಿ ಸ್ವಾಮಿ, ಶತ್ರುಗಳಿಗೆ ಒಳ್ಳೇವನಾಗಿ, ಮಿತ್ರರಿಗೆ ಕೆಟ್ಟೋನಾಗಿ.

ಡ್ಯೂಕ್ : ಅದಕ್ಕೆ ವಿರುದ್ಧವಾಗಿ ಅನ್ನು; ಸ್ನೇಹಿತರಿಗೆ ಒಳ್ಳೇವನು.

ನಕಲಿ : ಇಲ್ಲ ಸ್ವಾಮಿ, ಕೆಟ್ಟವ್ನು.

ಡ್ಯೂಕ್ : ಅದು ಹೇಗೆ ಸಾಧ್ಯ ?

ನಕಲಿ : ಹೇಗೇಂದ್ರೆ, ನನ್ನನ್ನವರು ಹೊಗಳಿ ಕತ್ತೆಯನ್ನಾಗಿ ಮಾಡ್ತಾರೆ; ಆದರೆ ನನ್ನ ಶತ್ರುಗಳು ನನ್ನ ಕತ್ತೇಂತ ನೇರವಾಗೇ ಹೇಳ್ತಾರೆ. ಆದ್ದರಿಂದ ನನ್ನ ಶತ್ರುಗಳಿಂದ ನನ್ನ ವಿಷಯ ಚೆನ್ನಾಗಿ ತಿಳಿಯುತ್ತೆ. ಆದರೆ ನನ್ನ

| | |
|---|---|
| | ಸ್ನೇಹಿತ್ರು ನಂಗೆ ಮೋಸ ಮಾಡ್ತಾರೆ. ಮುತ್ತುಗಳ ಹಾಗೇನೆ ತೀರ್ಮಾನ ಮಾಡೋದಾದ್ರೆ, ನಾಲ್ಕು ವಿರೋಧಗಳು ಸೇರಿ ಒಂದು ಅನುರೋಧ ಆಗೋದಾದ್ರೆ, ನಾನು ಶತ್ರುಗಳಿಗೆ ಒಳ್ಳೆಯವನಾಗ್ತೀನಿ, ಸ್ನೇಹಿತರಿಗೆ ಕೆಟ್ಟೋನಾಗ್ತೀನಿ. |
| ಡ್ಯೂಕ್ : | ಭೇಷ್, ಬಹಳ ಚೆನ್ನಾಗಿದೆ. |
| ನಕಲಿ : | ಖಂಡಿತವಾಗೂ ಇಲ್ಲ ಸ್ವಾಮಿ – ನನ್ನ ಸ್ನೇಹಿತರಾಗೋಕೆ ನಿಮಗೆ ಇಷ್ಟ ಇದ್ದರೂ. |
| ಡ್ಯೂಕ್ : | ನೀನು ನನಗೆ ಕೆಟ್ಟವನಾಗಬೇಡ. ಇಗೋ ಇಲ್ಲಿದೆ ವರಹ. (ಹಣವನ್ನು ನೀಡುತ್ತಾನೆ) |
| ನಕಲಿ : | ಇದರ ಜೊತೇಗೆ ಜೋಡಿ ಕೊಡಿ ಅಂದರೆ ಎರಡು ಬಗೆದ ಹಾಗೆ ಆಗುತ್ತೊ ಏನೋ ಸ್ವಾಮಿ. |
| ಡ್ಯೂಕ್ : | ಓ ಎರಡು ಬಗೆಯೋ ಸೂಚನೆ ಕೊಡ್ತಾ ಇದ್ದೀಯ. |
| ನಕಲಿ : | ತಮ್ಮ ಔದಾರ್ಯ ಇದೊಂದು ಬಾರಿ ಜೇಬಿಗೆ ಹೋಗಿ ಬರಲಿ, ಸ್ವಾಮಿ. ನಿಮ್ಮ ರಕ್ತ-ಮಾಂಸಗಳು ಅದನ್ನ ಅನುಸರಿಸಲಿ. |
| ಡ್ಯೂಕ್ : | ಆಯಿತು, ಎರಡು ಬಗೆಯೋ ಅಷ್ಟರ ಮಟ್ಟಿಗೆ ನಾನು ಪಾಪ ಮಾಡ್ತೇನೆ. ಇಗೋ ಇನ್ನೊಂದು. (ಹಣವನ್ನು ನೀಡುತ್ತಾನೆ) |
| ನಕಲಿ : | ಒಂದು, ಎರಡು, ಮೂರು ಒಳ್ಳೇ ಆಟ. ''ಮೂರಕ್ಕೆ ಮುಕ್ತಾಯ'' ಅನ್ನೋದು ಹಳೇ ಮಾತು. ''ತ್ರಿಪುಟ'' ಕುಣಿತದ ಗತೀಗೆ ಒಳ್ಳೆ ತಾಳ, ಅಥವಾ ಸಂತ ಬೆನೆಟ್ ಚರ್ಚ್‌ನ ಗಂಟೆಗಳು ನಿಮಗೆ ನೆನಪಿಗೆ ಬರುತ್ತೆ – ಒಂದು ಎರಡು, ಮೂರು! |
| ಡ್ಯೂಕ್ : | ಈ ಆಟದಿಂದ ಇನ್ನು ಹೆಚ್ಚಿಗೆ ದುಡ್ಡನ್ನ ನನ್ನಿಂದ ಬಿಚ್ಚಿಸೋದಕ್ಕೆ ಸಾಧ್ಯವಿಲ್ಲ. ನಿಮ್ಮ ಒಡತಿ ಹತ್ತಿರ ಹೋಗಿ ನಾನು ಅವರ ಹತ್ತಿರ ಮಾತಾಡೋದಕ್ಕಾಗಿ ಬಂದಿದ್ದೇನೆ ಅಂತ ಹೇಳು ; ಅವರನ್ನ ನಿನ್ನ ಜೊತೆಗೇ ಕರೆದುಕೊಂಡು ಬಂದರೆ ನನ್ನ ಔದಾರ್ಯ ಮತ್ತೆ ಎಚ್ಚರಗೊಳ್ಳಬಹುದು. |
| ನಕಲಿ : | ಆಗಲಿ ಸ್ವಾಮಿ. ನಿಮ್ಮ ಔದಾರ್ಯ ಅದುವರೆಗೆ ಮಲಗೇ ಇರ್ಲಿ. ನಾನೇನೋ ಹೋಗ್ತೀನಿ ಸ್ವಾಮಿ ; ಆದರೆ ನನ್ನ ಆಸೇನ ನೀವು |

ಪಾಪಕರವಾದ ದುರಾಸೆ ಅಂತ ಭಾವಿಸಬಾರ್ದು. ಹಾಗಾದ್ರೆ, ನಿಮ್ಮ ಔದಾರ್ಯ ಸ್ವಲ್ಪ ಹೊತ್ತು ಕಣ್ಮುಚ್ಚಿರಲಿ; ಒಂದು ಕ್ಷಣದಲ್ಲಿ ಬಂದು ನಾನದನ್ನ ಎಬ್ಬಿಸ್ತೀನಿ.

(ಅವನು ಒಳಗೆ ಹೋಗುತ್ತಾನೆ)

(ಆಂಟೋನಿಯೋನನ್ನು ಬಂಧಿಸಿ ರಕ್ಷಕ ಅಧಿಕಾರಿಗಳು ಕರೆತರುತ್ತಾರೆ)

ವಯೋಲ: ನನ್ನ ಕಾಪಾಡಿದ ವ್ಯಕ್ತಿ ಇಲ್ಲಿ ಬರುತ್ತಿದ್ದಾನೆ, ಸ್ವಾಮಿ

ಡ್ಯೂಕ್: ಅವನ ಮುಖದ ನೆನಪು ನನಗೆ ಚೆನ್ನಾಗಿದೆ,
ಆದರೂ ಕಳೆದ ಬಾರಿ ನಾನದನ್ನು ಕಂಡಾಗ
ಯುದ್ಧದ ಹೊಗೆಯಲ್ಲಿ ವಲ್ಕನ್‌ನಂತೆ ಕಪ್ಪಾಗಿತ್ತು.
ಇವನು ಕಡಿಮೆ ಎಳೆತ, ಚಿಕ್ಕ ಗಾತ್ರಗಳಿಂದ ಕೂಡಿದ್ದ
ಕ್ಷುದ್ರ ನಾವೆಯೊಂದಕ್ಕೆ ಕಪ್ತಾನನಾಗಿದ್ದ.
ಆದರೂ ಅದರಿಂದಲೇ ನಮ್ಮ ಶ್ರೇಷ್ಠ ನೌಕೆಗಳ ಮೇಲೆ
ಎಂಥ ಧಾಳಿಯನ್ನು ಮಾಡಿದ ಎನ್ನುತ್ತೀ!
ಅವನ ಹೊಡೆತಕ್ಕೆ ಸಿಕ್ಕ ಶತ್ರುಗಳು ಕೂಡ
ಅವನನ್ನ ಗೌರವಿಸಿದರು, ಅವನ ಹೆಸರನ್ನ ಹೊಗಳಿದರು.
ಏನು ಸಮಾಚಾರ?

ಮೊದಲ ಅಧಿಕಾರಿ: ಆರ್ಸಿನೋ ಪ್ರಭು, ಕ್ಯಾಂಡಿಯಯಲ್ಲಿದ್ದ 'ಫೀನಿಕ್ಸ್'
ಮತ್ತದರ ಸರಕನ್ನು ಹಿಡಿದ ಆಂಟೋನಿಯೊ ಇವನೇ.
ನಿಮ್ಮ ಸೋದರಳಿಯ ಟೈಟಸ್ ತಮ್ಮ
ಕಾಲು ಕಳಕೊಂಡಾಗ 'ಟೈಗರ್' ಹಡಗಿನ
ಮೇಲೇರಿದವನಿವನೇ. ಆ ಬೀದಿಯಲ್ಲಿ
ಅವಮಾನ-ಕಷ್ಟ ಪರಿಸ್ಥಿತಿಗಳಿಂದ ಹತಾಶನಾಗಿ
ಸ್ವಂತ ಜಗಳದಲ್ಲಿದ್ದಾಗ ನಾವಿವನನ್ನು ಹಿಡಿದೆವು.

ವಯೋಲ: ನನಗವರು ಸಹಾಯಾಡಿದರು,
ನನ್ನ ಪರವಾಗಿ ಹೋರಾಟಕ್ಕೆ ಸಿದ್ಧವಾದರು,
ಆದರೆ ಕೊನೆಗೆ ನನ್ನೊಡನೆ ವಿಚಿತ್ರವಾಗಿ ಮಾತಾಡಿದರು.
ಅದು ವ್ಯಗ್ರತೆಯಲ್ಲದೆ ಬೇರೇನೆಂದು ತಿಳಿಯಲಿಲ್ಲ.

ಡ್ಯೂಕ್: ಕುಖ್ಯಾತ ಸಾಗರಗಳ್ಳ! ಉಪ್ಪುನೀರ ಕಳ್ಳ!

ಕ್ರೌರ್ಯ- ದಾರುಣತೆಗಳಿಂದ ನೀನು ಯಾರನ್ನು
ಶತ್ರುಗಳಾಗಿಸಿ ಕೊಂಡಿರುವೆಯೋ ಅಂಥವರ ವಶಕ್ಕೆ
ಬರಲು ನಿನಗೆಂಥ ಭಂಡಧೈರ್ಯ ಬಂತು ?

ಆಂಟೋನಿಯೊ : ಆರ್ಸಿನೋ, ಘನತೆವೆತ್ತ ದೊರೆ,
ನೀವಿತ್ತ ಕೆಟ್ಟ ಹೆಸರನ್ನೆಲ್ಲ ತಳ್ಳಿಹಾಕುತ್ತೇನೆ;
ಆಂಟೋನಿಯೋ ಎಂದೂ ಸಾಗರಕಳ್ಳ ಅಥವಾ ಚೋರನಲ್ಲ;
ಆದರೆ ಸಮಂಜಸ ಕಾರಣಗಳಿಗಾಗಿ ನಾನು
ಆರ್ಸಿನೋರ ಶತ್ರುವೆಂಬುದನ್ನೊಪ್ಪುತ್ತೇನೆ.
ಯಾವುದೋ ಮಾಟ ನನ್ನನ್ನಿಲ್ಲಿಗೆ ಸೆಳೆದುತಂದಿತು.
ನಿಮ್ಮ ಬದಿಯಲ್ಲಿರುವ ಆ ಅತ್ಯಂತ ಕೃತಘ್ನ ಹುಡುಗ
ಅವನನ್ನು ಉದ್ರಿಕ್ತ ಹಾಗೂ ನೊರೆಗಟ್ಟಿದ್ದ
ಸಾಗರದ ಬಾಯಿಂದ ರಕ್ಷಿಸಿದೆ ನಾನು.
ಅವನಾಗಲೇ ಭಗ್ನಗೊಂಡ ಆಸೆಯಾಗಿದ್ದ.
ಅವನಿಗೆ ಜೀವವನ್ನಿತ್ತೆ, ಜೊತೆಗೆ ನನ್ನ ಪ್ರೀತಿಯನ್ನು
ಸ್ವಲ್ಪವೂ ಉಳಿಸಿಕೊಳ್ಳದೆ, ನಿರ್ಬಂಧಗೊಳಿಸದೆ
ಅವನಿಗೆ ಧಾರೆಯನ್ನೆರೆದೆ. ಅವನಿಗಾಗಿ,
ಕೇವಲ ಅವನ ಪ್ರೀತಿಗಾಗಿಯೇ ನಾನು
ಈ ಶತ್ರುಪಾಳೆಯದ ಊರಲ್ಲಿ ಸುಳಿದಾಡಿದೆ ;
ಆಕ್ರಮಣಕ್ಕೊಳಗಾದಾಗ ಅವನ ರಕ್ಷಣೆಗೆ ಧಾವಿಸಿದೆ.
ಅಲ್ಲಿಯೇ ನನ್ನನ್ನು ಸೆರೆಹಿಡಿದದ್ದು.
ಅವನ ಕುತಂತ್ರ, ಕಷ್ಟದಲ್ಲೂ ನೆರವಾಗದ ನಡತೆ,
ನಾನಾರೋ ತಿಳಿಯದೆಂಬ ನಟನೆ –
ಇವುಗಳನ್ನೆಲ್ಲ ಕಂಡಾಗ ಕಣ್ಣು ಮಿಟುಕಿಸುವಷ್ಟರಲ್ಲಿ
ಸ್ನೇಹ ಇಪ್ಪತ್ತು ವರ್ಷಗಳಷ್ಟು ಹಿಂದಾಯ್ತು.
ಅವನಿಗಾಗೇ ಎಂದು ನಾನು ಹಣದ ಚೀಲವನ್ನು
ಕೊಟ್ಟು ಆಗಿರಲಿಲ್ಲ ಅರ್ಧಗಂಟೆಯು ಕೂಡ ;
ಈಗದನ್ನು ನನಗೇ ಕೊಡಲು ನಿರಾಕರಿಸಿದ.

ವಯೋಲ : ಇದು ಹೇಗೆ ಸಾಧ್ಯ ?

ಡ್ಯೂಕ್ : ಇವನು ಈ ಊರಿಗೆ ಬಂದದ್ದು ಯಾವಾಗ ?

ಆಂಟೋನಿಯೊ : ಈ ದಿನವೇ ಪ್ರಭು ; ಮೂರು ತಿಂಗಳಿನಿಂದ,
ಒಂದೇ ಸಮನೆ, ಒಂದು ಕ್ಷಣವೂ ಬಿಡದೆ,
ಹಗಲೂ - ರಾತ್ರಿ ನಾವು ಜೊತೆಯಲ್ಲಿರುತ್ತಿದ್ದೆವು.
(ಒಲಿವಿಯ ತನ್ನ ಮನೆಯಿಂದ ಬರುತ್ತಾಳೆ, ಜೊತೆಗೆ ಪರಿವಾರ)

ಡ್ಯೂಕ್ : ಇಗೋ ಕೌಂಟೆಸ್ ಬರುತ್ತಿದ್ದಾರೆ,
ಸ್ವರ್ಗ ಭೂಮಿಗಿಳಿದಂತಾಯ್ತು.
ಅಯ್ಯ ನಿನಗೇ–ನಿನ್ನವು ಹುಚ್ಚು ಮಾತುಗಳು.
ಈ ಯುವಕ ಮೂರು ತಿಂಗಳಿನಿಂದ ನಮ್ಮ ಸೇವೆಯಲ್ಲಿದ್ದಾನೆ ;
ಅದೆಲ್ಲ ಸ್ವಲ್ಪ ಹೊತ್ತಿನ ಮೇಲೆ, ಅವನನ್ನತ್ತ ಕರೆದೊಯ್ಯಿರಿ.
(ಅಧಿಕಾರಿಗಳು ಹಾಗೇ ಮಾಡುತ್ತಾರೆ)

ಒಲಿವಿಯ : ಪ್ರಭು, ಅದೊಂದು ವಿಷಯದ ಹೊರತು
ಒಲಿವಿಯ ನಿಮ್ಮನು ಹೇಗೆ ಸಂತೋಷಗೊಳಿಸಬಹುದು ?
ಸಿಸೇರಿಯೋ, ನಿಮ್ಮ ಮಾತನ್ನು ನೀವುಳಿಸಿಕೊಳ್ಳಲಿಲ್ಲ.

ವಯೋಲ : ದೇವಿ !

ಡ್ಯೂಕ್ : ಸನ್ಮಾನ್ಯೆ ಒಲಿವಿಯ —

ಒಲಿವಿಯ : ಏನು ಹೇಳುತ್ತೀರಿ ಸಿಸೇರಿಯೋ ? ಪ್ರಭುಗಳು ದಯೆಯಿಟ್ಟು —
(ಸುಮ್ಮನಿರುವಂತೆ ಸೂಚಿಸುತ್ತಾಳೆ)

ವಯೋಲ : ಪ್ರಭುಗಳೇ ಹೇಳುತ್ತಾರೆ - ಕರ್ತವ್ಯ ನನ್ನ ಬಾಯಿ ಮುಚ್ಚಿಸಿದೆ.

ಒಲಿವಿಯ : ಸ್ವಾಮಿ, ಹಳೆಯ ರಾಗವನ್ನೇ ಹಾಡುವುದಾದರೆ
ನನಗದರಿಂದ ಸಂಗೀತವನ್ನು ಕೇಳಿದ ಮೇಲೆ
ಹುಯ್ಯಲನ್ನು ಕೇಳಿದಂತೆ ಕಿವಿ ಚಿಟ್ಟೆನ್ನುತ್ತದೆ.

ಡ್ಯೂಕ್ : ಇನ್ನೂ ಇಷ್ಟೊಂದು ನಿರ್ದಯವೇ ?

ಒಲಿವಿಯ : ಇನ್ನೂ ಅಷ್ಟೇ ದೃಢಚಿತ್ತ, ಪ್ರಭು.

ಡ್ಯೂಕ್ : ಮತ್ತೆ ವಕ್ರಮಾರ್ಗವೇ ? ಅನಾಗರಿಕ ಹೆಣ್ಣೆ
ನಿಮ್ಮ ಕೃತಘ್ನ, ಅಪವಿತ್ರ ಮಂದಿರಕ್ಕೆ
ಎಂಥ ಭಕ್ತಿಯೂ ಅರ್ಪಿಸದ ಅತ್ಯಂತ ಶ್ರದ್ಧೆಯ
ಪೂಜೆಯನ್ನು ನನ್ನಾತ್ಮ ಸಲ್ಲಿಸಿದೆ ! ನಾನೇನು ಮಾಡಲಿ ?

ಒಲಿವಿಯ: ಸಂತೋಷ ಕೊಡುವ, ಆದರೆ ನಿಮಗೆ ತಕ್ಕದ್ದನ್ನ ಆಡಿ.

ಡ್ಯೂಕ್: ಸಾವಂಚಿನಲ್ಲಿದ್ದ ಈಜಿಪ್ಟಿನ ಕಳ್ಳನಿಗೆನ್ನಿಸಿದಂತೆ,
ಅಂಥ ಮನಸ್ಸಿರುವುದಾದರೆ, ನಾನು ಪ್ರೀತಿಸಿದ
ವಸ್ತುವನ್ನ ಕೊಲ್ಲುವ ಬಯಕೆ ನನಗೆ ಬರಬಾರದೇ?
ಅನಾಗರಿಕ ಅಸೂಯೆ ಕೆಲವೊಮ್ಮೆ ಘನವಾಗಿ ತೋರುವುದು.
ಆದರೆ ನನ್ನ ಮಾತನ್ನು ಕೇಳಿ:
ನೀವು ನನ್ನ ಒಲವನ್ನು ಧಿಕ್ಕರಿಸಿರುವುದರಿಂದ,
ನಿಮ್ಮ ಒಲವಿನಲ್ಲಿ ನನಗಿರಬೇಕಾದ ಸ್ಥಾನದಿಂದ ನನ್ನ
ದೂರವಿರಿಸಲು ಕಾರಣ ಸ್ವಲ್ಪ ತಿಳಿದಿರುವುದರಿಂದ,
ಹಾಲುಗಲ್ಲೆದೆಯ ನೀವು ಕಠಿಣವಾಗಿಯೇ ಇರಿ.
ನೀವು ಯಾರನ್ನು ಪ್ರೀತಿಸುವಿರೋ ನಾ ಬಲ್ಲೆ
ಆ ಈ ಅಣುಗನ ಮೇಲೆ ನನಗೂ ಪ್ರೀತಿ, ದೇವರಾಣೆ.
ನನ್ನ ಒಡೆಯನ ಸ್ಥಾನದಲ್ಲಿ ಅಭಿಷಿಕ್ತನಾಗಿರುವ
ಅವನನ್ನು ನಿಮ್ಮ ಕ್ರೂರ ದೃಷ್ಟಿಯಿಂದ ಕಿತ್ತೆಸೆಯುತ್ತೇನೆ.
ನನ್ನೊಡನೆ ಬಾ ಹುಡುಗ, ತೊಂದರೆ ಕೊಡಲು
ನನ್ನ ಯೋಚನೆ ಪಕ್ವವಾಗಿದೆ ಈಗ.
ಪಾರಿವಾಳದಲ್ಲಿರುವ ಗಿಡುಗನ ಹೃದಯದ ವಿರುದ್ಧ
ಸೇಡು ತೀರಿಸಿಕೊಳ್ಳುವುದಕ್ಕಾಗಿ ನನ್ನ ಪ್ರೀತಿಯ
ಕುರಿಮರಿಯನ್ನೇ ಬಲಿ ಕೊಡುತ್ತೇನೆ.

(ಹಿಂದೆ ತಿರುಗುವನು)

ವಯೋಲ: (ಹಿಂದೆ ಹೋಗುತ್ತ) ನಿಮ್ಮ ಮನಃಶ್ಶಾಂತಿಗಾಗಿ, ಸಾವಿರ ಬಾರಿ
ಸಂತೋಷದಿಂದ ಸಾಯುತ್ತೇನೆ, ಅದು ಯುಕ್ತವೂ ಹೌದು.

ಒಲಿವಿಯ: ಸಿಸೇರಿಯೋ ಎಲ್ಲಿ ಹೋಗುತ್ತೀರಿ?

ವಯೋಲ: ನನ್ನ ಈ ಕಣ್ಣುಗಳಿಗಿಂತ, ಈ ಜೀವಕ್ಕಿಂತ ನಾನು
ಮಿಗಿಲಾಗಿ ಪ್ರೀತಿಸುವ, ಎಲ್ಲ ವಿಧಿಗಳನ್ನೂ
ಮೀರಿ ಪ್ರೀತಿಸುವ ಹೆಂಡತಿಯಂತೆ—
ಅವರ ಹಿಂದೆ. ಇದು ನಟನೆಯಾದರೆ,
ಪ್ರೀತಿಯನ್ನು ಕಲುಷಿತಗೊಳಿಸಿದ ನನಗೆ
ದೊರೆಯುವ ಶಿಕ್ಷೆಯನ್ನ ಮೇಲೆ ಕಾಣುತ್ತೀರಿ.

ಒಲಿವಿಯ : ಅಯ್ಯೋ ನನ್ನ ಗತಿ! ಮೋಸ ಹೋದೆನೇ!

ವಯೋಲ : ನಿಮ್ಮನಾರು ಮೋಸಗೊಳಿಸುವವರು ?
ನಿಮಗೆ ಅನ್ಯಾಯ ಮಾಡಿದವರಾರು ?

ಒಲಿವಿಯ : ನಿಮ್ಮನ್ನು ನೀವೇ ಮರೆತಿರಾ ?
ಅದು ಅಷ್ಟು ಹಳೆಯದೇ ?
ಪೂಜ್ಯ ಪಾದ್ರಿಯವರನ್ನು ಕರೆದು ತಾ.

(ಒಬ್ಬ ಸೇವಕನು ಹೋಗುತ್ತಾನೆ)

ಡ್ಯೂಕ್ : (ವಯೋಲಳಿಗೆ) ನಡಿ, ಹೊರಡೋಣ!

ಒಲವಿಯ : ಎಲ್ಲಿಗೆ ಸ್ವಾಮಿ ? ಸಿಸೇರಿಯೋ, ನನ್ನ ಪತಿ ನಿಲ್ಲಿ.

ಡ್ಯೂಕ್ : ಪತಿ!

ಒಲಿವಿಯ : ಹೌದು ಪತಿ. ಅವರದನ್ನು ಲ್ಲಗಳೆಯಬಲ್ಲರೇ ?

ಡ್ಯೂಕ್ : ಅವರ ಗಂಡನೆ ನೀನು ?

ವಯೋಲ : ಅಲ್ಲ ಪ್ರಭು, ನಾನಲ್ಲ.
ಅಯ್ಯೋ, ಭಯದ ತುಚ್ಚತನ ನಿಮ್ಮ ಗುರುತನ್ನು
ಬಚ್ಚಿಟ್ಟುಕೊಳ್ಳುವಂತೆ ಮಾಡುತ್ತಿದೆ.
ಹೆದರಿಪರು, ಸಿಸೇರಿಯೊ, ನಿಮ್ಮ ಅದೃಷ್ಟವನ್ನು ಹಿಡಿದು
ನೀವು ಏನೆಂದು ಬಲ್ಲಿರೋ ಅದೇ ಆಗಿ,
ಆಗ ನೀವು ಯಾರಿಗೆ ಹೆದರುತ್ತಿದ್ದೀರೋ
ಅವರಷ್ಟೇ ಹಿರಿಯನಾಗುತ್ತೀರಿ ಆಗ. (ಪಾದ್ರಿಯು ಬರುತ್ತಾನೆ)

ಓ ಬನ್ನಿ ಪೂಜ್ಯರೇ, ನಿಮ್ಮ ಪೂಜ್ಯತೆಯಾಣೆ,
ನನ್ನ ಮತ್ತು ಈ ಯುವಕರ ನಡುವೆ
ಏನು ನಡೆಯಿತೆಂಬುದನ್ನು ತಿಳಿಸಿರಿ ;
ಇದನ್ನು ಗುಟ್ಟಾಗಿಡಲು ತೀರ್ಮಾನಿಸಿದ್ದರೂ ಆಗ
ಕಾಲ ಒದಗುವ ಮುಂಚೆ ತಿಳಿಸಬೇಕಾಗಿದೆ ಬೇಗ,

ಪುರೋಹಿತ : ಪ್ರೇಮದ ಚಿರಂತನ ಬಂಧನದ ಒಪ್ಪಂದ
ನಿಮ್ಮಿಬ್ಬರ ಪಾಣಿಗ್ರಹಣದಿಂದ ಸ್ಥಿರವಾಗಿ

ಪವಿತ್ರ ಚುಂಬನದ ಸಾಕ್ಷಿಯಾಗಿ,
ಉಂಗುರದ ವಿನಿಮಯದಿಂದ ಬಲಗೊಂಡು
ಈ ಒಡಂಬಡಿಕೆಯ ಧಾರ್ಮಿಕಾಚರಣೆ
ನನ್ನ ಪೌರೋಹಿತ್ಯದಡಿಯಲ್ಲಿ ದಾಖಲಾಗಿದೆ.
ಆಗಿನಿಂದೀಚೆ ನನ್ನ ಸಮಾಧಿಯೆಡೆ ಎರಡು ಗಂಟೆಗಳಷ್ಟು
ಮುಂದೆ ಸಾಗಿರುವೆನೆಂದು ಗಡಿಯಾರ ಸೂಚಿಸುತ್ತಿದೆ.

ಡ್ಯೂಕ್ : ಏ, ಸೋಗುಹಾಕುವ ಕುನ್ನಿ! ನಿನ್ನ ತೊಗಲಿನ ಮೇಲೆ ಕಾಲ ನರೆತ
ಕೂದಲನ್ನ ನಾಟಿ ಮಾಡಿರುವಾಗ ನೀನೇನು ಮಾಡುವೆ?
ಇಲ್ಲದಿದ್ದರೆ ನಿನ್ನ ಮೋಸವಿಷ್ಟು ಬೇಗನೆ ಬಲಿತು
ನಿನ್ನ ಪಟ್ಟಿಂದ ನೀನೇ ಬೀಳುವಂತಾಗುತ್ತಿತ್ತೇ?
ನಮಸ್ಕಾರ, ಅವಳನ್ನು ಸೇರು. ಆದರೆ ನಾವಿಬ್ಬರೂ
ಇನ್ನೆಂದೂ ಸೇರೆವೋ ಆ ದಿಕ್ಕಿನೆಡೆ ಕಾಲು ಹಾಕು.

ವಯೋಲ : ಪ್ರಭು, ಪ್ರಮಾಣ ಮಾಡಿ ಹೇಳುತ್ತೇನೆ—

ಒಲಿವಿಯ : ಪ್ರಮಾಣ ಮಾಡಬೇಡಿ! ನಿಮಗೆ ಅತಿ ಭೀತಿಯಿದ್ದರೂ
ಸ್ವಲ್ಪವಾದರೂ ವಿಶ್ವಾಸವನ್ನುಳಿಸಿಕೊಳ್ಳಿ.
(ಸರ್ ಆಂಡ್ರ್ಯೂ ಆಗ್ಯುಚೀಕ್ ತಲೆ ಗಾಯ ಮಾಡಿಕೊಂಡು ಬರುತ್ತಾನೆ)

ಸರ್ ಆಂಡ್ರ್ಯೂ : ದೇವರು ನಿಮಗೆ ಒಳ್ಳೇದು ಮಾಡಲಿ ; ದಯಪಿಟ್ಟು ಒಬ್ಬ ವೈದ್ಯನನ್ನು ಸರ್ ಟೋಬಿ ಹತ್ತಿರ ಕಳಿಸಿ.

ಒಲಿವಿಯ : ಏನು ಸಮಾಚಾರ?

ಸರ್ ಆಂಡ್ರ್ಯೂ : ಅವನು ನನ್ನ ತಲೇನ ಅಡ್ಡಡ್ಡಲಾಗಿ ಸೀಳಿಬಿಟ್ಟ. ಸರ್ ಟೋಬಿ ಬುರುಡೆ ಮೇಲೆ ರಕ್ತದಿಂದ ಕೂಡಿರೋ ಹುಂಜನ ಜುಂಗು ಕೊಟ್ಟಿದ್ದಾನೆ. ನಲವತ್ತು ಪೌಂಡು ಕೊಟ್ಟರೂ ಬೇಡ, ಮನೇಲಿ ಇದ್ದಿದ್ರೆ ಚೆನ್ನಾಗಿತ್ತು.

ಒಲಿವಿಯ : ಇದನ್ನು ಮಾಡಿದವರಾರು, ಸರ್ ಆಂಡ್ರ್ಯೂ?

ಸರ್ ಆಂಡ್ರ್ಯೂ : ಕೌಂಟ್‌ನ ಕಡೆಯವನು, ಸಿಸೇರಿಯೋ ಅನ್ನೋನು. ನಾವವನನ್ನು ಹೇಡಿ ಅಂತ ತಿಳಿದಿದ್ವು. ಆದರೆ ಅವನು ಭೂತದ ಅಪರಾವತಾರ.

ಡ್ಯೂಕ್ : ನಮ್ಮ ಕಡೆ ಸಿಸೇರಿಯೋನೇ?

ಸರ್ ಆಂಡ್ರ್ಯೂ : ಅಯ್ಯೋ ದೇವರೇ, ಅವನೇ ಬಂದ! ನಂದೇನೂ ತಪ್ಪಿಲ್ದೆ ನೀವು ತಲೆ ಒಡೆದ್ರಿ, ನಾನು ಹಾಗೆ ಮಾಡಿದ್ದು ಸರ್ ಟೋಬಿ ಹೇಳಿಕೊಟ್ಟಿದ್ರಿಂದ.

ವಯೋಲ : ನೀವೇಕೆ ನನಗೆ ಹೇಳುತ್ತೀರಿ? ನಾನು ನಿಮ್ಮನ್ನ
ಹೊಡೆಯಲೇ ಇಲ್ಲ. ಕಾರಣವಿಲ್ಲದೇ ನೀವೇ
ನನ್ನ ಮೇಲೆ ಕತ್ತಿ ಮಸೆದಾಗಲೂ ನಾನು
ನಿಮ್ಮೊಡನೆ ಚೆನ್ನಾಗಿ ಮಾತನಾಡಿದೆ, ಹೊಡೆಯಲಿಲ್ಲ.

ಸರ್ ಆಂಡ್ರ್ಯೂ : ತಲೆ ಒಡೆದು ಹುಂಜನ ಜುಂಗು ಥರಾ ರಕ್ತ ಸುರೀತಿರೋದನ್ನ ಗಾಯ ಅನ್ನೋದಾದ್ರೆ, ನೀವು ನನ್ನನ್ನ ಹೊಡೆದ್ರಿ. ತಲೇಲಿ ರಕ್ತ ಸುರಿಯೋದು ನಿಮಗೆ ಏನೂ ಅಲ್ಲಾಂತ ಕಾಣತ್ತೆ.

(ಸರ್ ಟೋಬಿ ರಕ್ತ ಸುರಿಸುತ್ತ ಬರುತ್ತಾನೆ. ನಕಲಿ ಕರೆತರುತ್ತಾನೆ)

ಇಗೋ ಸರ್ ಟೋಬಿ ಕುಂಟ್ತ ಬರ್ತಿದಾನೆ. ಅವನ ಹತ್ರ ಇನ್ನಷ್ಟು ವಿಚಾರ ಕೇಳಿ. ಆದರೆ ಅವ್ನೇನಾದ್ರೂ ಕುಡೀದೆ ಇದ್ದಿದ್ರೆ ಈಗಿಗಿಂತ ಹೆಚ್ಚಿಗೆ ನಿಮ್ಮನ್ನ ಚಿಟುಕು ಮುಳ್ಳಾಡಿಸ್ತಿದ್ದ.

ಡ್ಯೂಕ್ : ಏನು ಸಮಾಚಾರ? ಏನಾಗಿದೆ ನಿಮಗೆ?

ಸರ್ ಟೋಬಿ : ಎಲ್ಲ ಒಂದೇ. ಅವನು ನಂಗೆ ಹೊಡೆದ ಅಲ್ಲಿಗೆ ಎಲ್ಲ ಮುಗೀತು. (ನಕಲಿಗೆ) ಅಯ್ಯ ಹೆಂಡಪೋತ, ಡಿಕ್ ವೈದ್ಯರನ್ನ ನೋಡಿದೆಯ?

ನಕಲಿ : ಸರ್ ಟೋಬಿ, ಅವರು ಒಂದು ಗಂಟೆಯಿಂದ ಕುಡಿದಿದ್ದಾರೆ. ಬೆಳಗ್ಗೆ ಎಂಟು ಗಂಟೆಯಿಂದ ಅವರು ಜಿಡುಗಣ್ಣರಾಗಿದ್ದಾರೆ.

ಸರ್ ಟೋಬಿ : ಹಾಗಾದ್ರೆ ಅವನೊಬ್ಬ ಪೋಕರಿ. ಹೆಜ್ಜೆ ಮೇಲೆ ಹೆಜ್ಜೆ ಇಡೋ ವಿಧಾನದ್ರೋಹಿ. ಕುಡುಕ ಪೋಲಿಗಳನ್ನ ಕಂಡರೆ ನಂಗಾಗೋಲ್ಲ.

ಒಲಿವಿಯ : ಅವನನ್ನ ಕರೆದುಕೊಂಡು ಹೋಗು! ಅವರ ಮೇಲೆ ಈ ದಾಂಧಲೆ ಮಾಡಿದವರು ಯಾರು?

ಸರ್ ಆಂಡ್ರ್ಯೂ : (ಮೇಲೆದ್ದು) ನಾನು ನಿನ್ನ ಜೊತೆ ಬರ್ತೀನಿ, ಸರ್ ಟೋಬಿ. ನಮ್ಮಿಬ್ರಿಗೂ ಒಟ್ಟಿಗೆ ಶುಶ್ರೂಷೆ ಮಾಡ್ತಾರೆ ವೈದ್ಯರು.

ಸರ್ ಟೋಬಿ : ಜೊತೆಗೇ ಬರ್ತೀಯ? ಕತ್ತೆ ತಲೆಯೋನೇ, ತಲೆಹೋಕ, ದಗಾಕೋರ! ಸಣ್ಣ ಮುಖದ ದಗಾಕೋರ, ಗುಗ್ಗು!

ಒಲಿವಿಯ : ಅವನನ್ನ ಕರೆದುಕೊಂಡು ಹೋಗಿ ಮಲಗಿಸಿ ಅವನ ಗಾಯವನ್ನು
ನೋಡಿಕೊಳ್ಳಿ.
(ನಕಲಿ, ಸರ್ ಟೋಬಿ ಮತ್ತು ಸರ್ ಆಂಡ್ರ್ಯೂ ಹೋಗುತ್ತಾರೆ)
(ಸೆಬಾಸ್ಟಿಯನ್ ಚೌಕದ ಬಳಿ ಬರುತ್ತಾನೆ)

ಸೆಬಾಸ್ಟಿಯನ್ : ನನ್ನ ಕ್ಷಮಿಸಿ, ನಿಮ್ಮ ಬಂಧುಗಳನ್ನ ನೋಯಿಸಿದ್ದೇನೆ.
ಆದರೆ ರಕ್ತ ಹಂಚಿಕೊಂಡ ಸೋದರರಾಗಿದ್ದರೂ
ಇದೇ ಜಾಣ್ಮೆ ಕ್ಷೇಮಗಳಿಂದ ನಡೆಸಿಕೊಳ್ಳುತ್ತಿದ್ದೆ.
(ಎಲ್ಲರೂ ಚಕಿತರಾಗಿ ನಿಲ್ಲುವರು)
ನನ್ನ ಕಡೆ ವಿಚಿತ್ರವಾಗಿ ನೋಡುತ್ತಿದ್ದೀರಿ ನೀವೆಲ್ಲ.
ಇದರಿಂದ ನಿಮಗೆ ನೋವಾಗಿದೆಯೆಂದು ತಿಳಿಯುತ್ತದೆ.
ಜೇನಿನಂತಹ ಹುಡುಗಿ, ಕೊಂಚ ಹಿಂದೆ ಮಾಡಿದ
ಪರಸ್ಪರ ಪ್ರತಿಜ್ಞೆಗಳಿಗಾಗಿಯಾದರೂ ಕ್ಷಮಿಸಿರೆನ್ನ.

ಡ್ಯೂಕ್ : ಒಂದೇ ಮುಖ, ಒಂದೇ ಸ್ವರ, ಒಂದೇ ಉಡುಪು,
ಆದರೆ ವ್ಯಕ್ತಿಗಳು ಇಬ್ಬರು ; ಇರುವ, ಇಲ್ಲದ
ಪ್ರಕೃತಿಯದೇ ಒಂದು ಪಡಿಯಚ್ಚು!

ಸೆಬಾಸ್ಟಿಯನ್ : ಆಂಟೋನಿಯೋ, ನನ್ನ ಪ್ರಿಯ ಆಂಟೋನಿಯೋ!
ನೀವು ಕಣ್ಮರೆಯಾದಾಗಿನಿಂದ ಕಾಲ
ಹೇಗೆ ನನ್ನನ್ನು ಚುಚ್ಚಿ ಹಿಂಸಿಸಿತು!

ಆಂಟೋನಿಯೊ : ಸೆಬಾಸ್ಟಿಯನ್ ನೀವೇ?

ಸೆಬಾಸ್ಟಿಯನ್ : ಏಕೆ ಸಂಶಯವೇ, ಆಂಟೋನಿಯೋ?

ಆಂಟೋನಿಯೊ : ನೀವು ನಿಮ್ಮನ್ನೆ ಹೇಗೆ ಇಬ್ಭಾಗ ಮಾಡಿಕೊಂಡಿದ್ದೀರಿ?
ಒಂದು ಸೇಬನ್ನು ಮಧ್ಯದಲ್ಲಿ ಸೀಳಿದರೂ
ಈ ಎರಡು ಜೀವಗಳಂತೆ ಒಂದೇ ರೀತಿಯಿರಲು ಸಾಧ್ಯವಿಲ್ಲ.
ಇವರಲ್ಲಿ ಸೆಬಾಸ್ಟಿಯನ್ ಯಾರು?

ಒಲಿವಿಯ : ಅತ್ಯದ್ಭುತ!

ಸೆಬಾಸ್ಟಿಯನ್ : ನಾನೇ ಅಲ್ಲಿ ನಿಂತಿದ್ದೇನೆಯೇ? ನನಗೆ ಸೋದರನೇ ಇಲ್ಲ.
ಇಲ್ಲಿ ಅಲ್ಲಿ ಎಲ್ಲೆಡೆಯು ಇರಬಲ್ಲ

ದೈವತ್ವ ನನ್ನ ಸ್ವಭಾವದಲ್ಲಿರಲು ಸಾಧ್ಯವಿಲ್ಲ.
ನನಗೊಬ್ಬ ತಂಗಿಯಿದ್ದಳು :
ಅವಳನ್ನ ಕಬಳಿಸಿದವು ಸಮುದ್ರದ ಕುರುಡು ಅಲೆಗಳು.
ದಯವಿಟ್ಟು ಹೇಳಿ, ನೀವು ನನಗೆಂಥ ಸಂಬಂಧಿ ?
ನಿಮ್ಮ ದೇಶವಾವಾದು? ಹೆಸರೇನು? ತಾಯ್ತಂದೆಯರು ಯಾರು?

ವಯೋಲ : ನನ್ನದು ಮೆಸಾಲಿನ್ ನಗರ ; ತಂದೆ ಸೆಬಾಸ್ಟಿಯನ್.
ಸೆಬಾಸ್ಟಿಯನ್ ಎಂಬುವನು ನನ್ನ ಸೋದರ ಕೂಡ :
ಇದೇ ಉಡುಪಿನಲ್ಲಿ ನೀರಲ್ಲಿ ಸಮಾಧಿಯಾದನವನು.
ಚೇತನಗಳು ಮನುಷ್ಯ ಜನ್ಮದ ರೂಪ-ಬಟ್ಟೆಗಳನ್ನು
ಧರಿಸಬಲ್ಲವಾದರೆ, ನೀವು ನನ್ನ ಹೆದರಿಸುತ್ತೀರಿ.

ಸೆಬಾಸ್ಟಿಯನ್ : ನಾನು ಚೇತನ ನಿಜ. ಆದರೆ ಹುಟ್ಟಿನಿಂದಲೇ
ಪಡೆದ ದೇಹದಲ್ಲಿಯೆ ನಾನು ವಾಸಿಸಿದ್ದೇನೆ.
ನೀವು ಹೆಣ್ಣಾಗಿದ್ದರೆ, ಕುರುಹುಗಳು ಹೊಂದುವುದರಿಂದ,
ನಿಮ್ಮ ಕೆನ್ನೆಯ ಮೇಲೆ ಕಣ್ಣೀರ ಸುರಿಸಿ
''ನೀರು ಪಾಲಾದ ತಂಗಿ ವಯೋಲ, ಸ್ವಾಗತ'' ಎನ್ನುತ್ತಿದ್ದೆ.

ವಯೋಲ : ನನ್ನ ತಂದೆಯ ಹುಬ್ಬಿನ ಮೇಲೊಂದು ಮಚ್ಚೆಯಿತ್ತು.

ಸೆಬಾಸ್ಟಿಯನ್ : ನನ್ನ ತಂದೆಗೂ ಕೂಡ.

ವಯೋಲ : ವಯೋಲ ಹುಟ್ಟಿ ಸರಿಯಾಗಿ ಹದಿಮೂರು ವರ್ಷ ತುಂಬಿದ
ದಿನವೇ ತೀರಿಕೊಂಡರು ಅವರು.

ಸೆಬಾಸ್ಟಿಯನ್ : ಓ, ಆ ನೆನಪು ನನ್ನ ಮನಸ್ಸಿನಲ್ಲಿನ್ನೂ ಹಸಿರಾಗಿದೆ! ನನ್ನ ತಂಗಿಗೆ
ಹದಿಮೂರು ವರ್ಷ ತುಂಬಿದ ದಿನವೇ ಅವರು ತಮ್ಮ
ಯಾತ್ರೆಯನ್ನು ಮುಗಿಸಿದರು.

ವಯೋಲ : ನಮ್ಮಿಬ್ಬರ ಸಂತೋಷಕ್ಕೆ ನನ್ನ ಮೇಲಡರಿರುವ
ಈ ಗಂಡುಡುಗೆಯನ್ನುಳಿದು ಮತ್ತೇನೂ ಅಡ್ಡಿಯಾಗದಿದ್ದರೆ,
ದೇಶ ಕಾಲ ಘಟನೆಗಳೆಲ್ಲ ಪ್ರತಿಯೊಂದು ಕೂಡಿ
ನಾನು ವಯೋಲ ಎಂದು ಸ್ಥಿರಪಡಿಸುವವರೆಗೂ
ನನ್ನನ್ನಾಲಂಗಿಸಬೇಡಿ. ಇದರ ರುಜುವಾತಿಗಾಗಿ
ಈ ಊರ ಒಬ್ಬ ಕ್ಯಾಪ್ಟನ್‌ನಲ್ಲಿಟ್ಟಿದ್ದ ನನ್ನ

ಹೆಣ್ಣುಡುಗೆಗಳನ್ನ ತಂದು ತೋರಿಸುತ್ತೇನೆ.
ಅವರ ಕೃಪೆಯಿಂದಲೇ ನಾನು ಈ ಉದಾತ್ತ
ಪ್ರಭುಗಳ ಸೇವೆ ಸಲ್ಲಿಸುವಂತಾಯಿತು.
ಅಲ್ಲಿಂದ ನನ್ನ ಬಾಳಲ್ಲಿ ನಡೆದಿರುವ ಘಟನೆಗಳೆಲ್ಲ
ಈ ಒಡೆಯ–ಒಡತಿಯರ ನಡುವೆ ಆದದ್ದು.

ಸೆಬಾಸ್ಟಿಯನ್ : (ಒಲಿವಿಯಳಿಗೆ) ಈಗರ್ಥವಾಯಿತು, ಸಖ್ಯೆ, ನೀವು ತಪ್ಪು ತಿಳಿದದ್ದು;
ಪ್ರಕೃತಿ ತನ್ನೆಡೆಗೆ ಅದರಲ್ಲಿ ಸೆಳೆಯಿತು ನಿಮ್ಮ
ಹೆಣ್ಣಿನೊಂದಿಗೆ ನಿಮ್ಮ ಮದುವೆಯಾಗುತ್ತಿತ್ತು,
ಆದರೆ ಅದರಲ್ಲಿ ನಿಮಗೆ ವಂಚನೆಯಾಗಲಿಲ್ಲ.
ಹೆಣ್ಣು ಗಂಡಿಬ್ಬರಿಗೂ ನಿಶ್ಚಿಂತಗೊಂಡಿದ್ದಿರಿ ನೀವು.

ಡ್ಯೂಕ್ : ನಿಬ್ಬೆರಗಾದಿರಿ ನೀವು, ಶ್ರೇಷ್ಠ ವಂಶಜರಿವರು.
ಹೀಗಾದರೆ, ಪಡಿಯಚ್ಚೆ ನಿಜವೆಂದು ಕಾಣುತಿದೆ,
ಈ ಸಂತಸಪೂರ್ಣ ಭಾಗದಲ್ಲಿ ನನಗೂ ಪಾಲಿದೆ.
(ವಯೋಲಳಿಗೆ) ಹುಡುಗ, ನೀ ನನಗೆ ಸಾವಿರ ಬಾರಿ ಹೇಳಿದ್ದೀಯೆ
ನೀನು ನನ್ನ ಪ್ರೀತಿಸಿದಂತೆ ಹೆಣ್ಣ ಪ್ರೀತಿಸಲಾರೆ ಎಂದು.

ವಯೋಲ : ಆ ಮಾತುಗಳನ್ನೆಲ್ಲ ಮತ್ತೆ ಪ್ರಮಾಣ ಮಾಡಿ ಹೇಳುತ್ತೇನೆ.
ಹಗಲು–ರಾತ್ರಿಗಳನ್ನ ಭೇದಿಸುವ
ಬೆಂಕಿಯುಂಡೆಯ ಹಾಗೆ ಆ ಮಾತುಗಳೆಲ್ಲ
ನನ್ನ ಚೇತನದಲ್ಲಿನ್ನೂ ಸತ್ಯವಾಗುಳಿದಿಹವು.

ಡ್ಯೂಕ್ : ಕೈ ನೀಡು, ಹೆಣ್ಣುಡುಗೆಗಳಲ್ಲಿ ನಾನು
ನಿನ್ನ ಕಾಣಬಯಸುತ್ತೇನೆ.

ವಯೋಲ : ನನ್ನ ಮೊದಲು ದಡ ಕಾಣಿಸಿದ ಕ್ಯಾಪ್ಟನ್ನರ
ಮನೆಯಲ್ಲಿ ಹೆಣ್ಣುಡುಗೆಗಳಿವೆ. ಅವರೀಗ
ಒಡತಿಯರ ಪಾರುಪತ್ತೇದಾರ ಮಾಲ್ವೋಲಿಯೋರ
ದೂರಿನ ಮೇಲೆ ಸೆರೆಯಲ್ಲಿದ್ದಾರೆ.

ಒಲಿವಿಯ : ಅವರು ಅವರನ್ನ ಬಿಡಿಸುತ್ತಾರೆ. ಮಾಲ್ವೋಲಿಯೋರನ್ನ ಕರೆತನ್ನಿ.
ಆದರೂ ಪಾಪ, ಈಗ ನೆನಪಿಗೆ ಬರುತ್ತಿದೆ,
ಆ ಬಡಪಾಯಿಗೀಗ ಬುದ್ಧಿಭ್ರಮಣೆಯಾಗಿದೆಯಂತೆ.

(ನಕಲಿಯು ಒಂದು ಕಾಗದದೊಂದಿಗೆ ವಾಪಸ್ಸು ಬರುತ್ತಾನೆ. ಜೊತೆಗೆ ಫೇಜಿಯನ್)
ನನ್ನನ್ನು ಹಿಂಡುತ್ತಿದ್ದ ಈ ಹುಚ್ಚು ಅವರ ಹುಚ್ಚನ್ನೇ ನೆನಪಿನಿಂದ ಅಳಿಸಿತ್ತು. ಅವರು ಹೇಗಿದ್ದಾರಯ್ಯ ?

ನಕಲಿ : ನಿಜವಾಗಿ ತಾಯಿ, ಅವರು ಸೈತಾನನನ್ನು ಮೈಲಿ ದೂರವಿಟ್ಟಿದ್ದಾರೆ. ಅವರು ನಿಮಗೊಂದು ಕಾಗದ ಬರ್ದಿದಾರೆ. ಅದನ್ನ ನಿಮಗೆ ನಾನು ಬೆಳಿಗ್ಗೇನೇ ಕೊಡ್ಬೇಕಾಗಿತ್ತು. ಆದರೆ ಹುಚ್ಚನ ಕಾಗದಧಲ್ಲಿ ವೇದವಾಕ್ಯವಿಲ್ಲದಿರೋದರಿಂದ ಅದನ್ನ ತಲುಪಿಸೋದ್ರಿಂದ ಲಾಭವೇನೂ ಇಲ್ಲ.

ಒಲಿವಿಯ : ಅದನ್ನ ಒಡೆದು ಓದು.

ನಕಲಿ : ಹುಚ್ಚನ ಕಾಗದಾನ ನಕಲಿ ಓದೋದು ಕೇಳಿ ಪುನೀತರಾಗಿ. (ಅವನು ಕಿರುಚುತ್ತಾನೆ) ''ದೇವರಾಣೆ, ಒಡತಿ'' –

ಒಲಿವಿಯ : ಏನು ಸಮಾಚಾರ ? ನಿಂಗೇನಾದ್ರೂ ಹುಚ್ಚು ಹಿಡೀತಾ ?

ನಕಲಿ : ಅಲ್ಲ, ನಾನು ಹುಚ್ಚುತನಾನ ಓದ್ತಾ ಇದ್ದೀನಿ. ಅದು ಹೇಗಿದೆ ಅನ್ನೋದು ನಿಮಗೆ ಸರಿಯಾಗಿ ತಿಳೀಬೇಕು ಅಂತಿದ್ರೆ ಅಲ್ಲಿರೋ ವಿಷಯಕ್ಕೆ ತಕ್ಕನಾದ ಧ್ವನೀಲಿ ಓದೋದಕ್ಕೆ ಅವಕಾಶ ಕೊಡಿ.

ಒಲಿವಿಯ : ಸರಿಯಪ್ಪ, ಹೇಗೆ ಸರಿಯೋ ಹಾಗೇ ಓದು.

ನಕಲಿ : ಆಗಲಿ. ಅವರ ಮಾತನ್ನ ಸರಿಯಾಗಿ ಓದಬೇಕಾದ್ರೆ ಹಾಗೇ ಓದ್ಬೇಕು. ಆದ್ದರಿಂದ ರಾಜಕುಮಾರಿಯವರೇ, ಕಿವಿಗೊಟ್ಟು ಕೇಳಿ.

ಒಲಿವಿಯ : (ಅವನಿಂದ ಕಾಗದವನ್ನು ಕಸಿದುಕೊಂಡು ಫೇಜಿಯನ್‌ಗೆ ಕೊಟ್ಟು) ಅಯ್ಯ, ಇದನ್ನ ನೀನು ಓದು.

ಫೇಜಿಯನ್ : (ಓದುತ್ತಾನೆ) ''ದೇವರಾಣೆ, ಒಡತಿ, ನೀವು ನನಗೆ ಅನ್ಯಾಯ ಮಾಡಿದ್ದೀರಿ. ಈ ವಿಷಯ ಪ್ರಪಂಚಕ್ಕೇ ಗೊತ್ತಾಗಲಿ. ನೀವು ನನ್ನನ್ನ ಕತ್ತಲ ಕೋಣೆಯಲ್ಲಿ ಕೂಡಿಹಾಕಿ ನಿಮ್ಮ ಕುಡುಕ ಸೋದರ ಮಾವನ ಉಸ್ತುವಾರಿಯಲ್ಲಿ ಇಟ್ಟಿದ್ದರೂ ನನ್ನ ಬುದ್ಧಿ ನಿಮ್ಮದರಷ್ಟೇ ಚೆನ್ನಾಗಿದೆ. ನಾನು ಹಾಕಿಕೊಂಡಿರೋ ಬಟ್ಟೆಗಳನ್ನು ನಾನು ತೊಡೋಕೆ ಪ್ರಚೋದನೆ ಕೊಟ್ಟ ನಿಮ್ಮ ಕಾಗದ ನನ್ನ ಹತ್ತಿರವಿದೆ. ಅದರಿಂದ

ನಾನು ನ್ಯಾಯವನ್ನು ಪಡೆಯುವುದರ ಜೊತೆಗೆ ನಿಮಗೆ ಅವಮಾನವನ್ನು ಮಾಡುತ್ತೇನೆ, ಇದರಲ್ಲಿ ಸಂದೇಹವಿಲ್ಲ. ನನ್ನ ಬಗ್ಗೆ ನೀವು ಏನು ಬೇಕಾದರೂ ತಿಳಿದುಕೊಳ್ಳಿ. ನನ್ನ ಕರ್ತವ್ಯವನ್ನು ಸ್ವಲ್ಪ ಮರೆತು ನನ್ನ ನೋವಿನ ವಿಷಯವನ್ನ ಹೇಳಿಕೊಳ್ಳುತ್ತಿದ್ದೇನೆ.

– ಹುಚ್ಚನಂತೆ ಕಾಣಲ್ಪಟ್ಟ ಮಾಲ್ವೋಲಿಯೊ''

ಒಲಿವಿಯ: ಇದನ್ನ ಅವರೇ ಬರೆದರೇ?

ನಕಲಿ: ಹೌದು, ಒಡತಿ.

ಡ್ಯೂಕ್: ಇದರಲ್ಲೇನೂ ಹುಚ್ಚಿನ ಸೂಚನೆ ಹೆಚ್ಚಿಗೆ ಇಲ್ಲ.

ಒಲಿವಿಯ: ಫೇಬಿಯನ್, ಅವರನ್ನ ಬಿಡಿಸಿ ಇಲ್ಲಿಗೆ ಕರೆದುತಾ.

(ಫೇಬಿಯನ್ ಒಳಗೆ ಹೋಗುತ್ತಾನೆ)

ಪ್ರಭು, ಇವುಗಳನ್ನೆಲ್ಲ ನೋಡಿ, ನಿಮಗಿಷ್ಟವಿದ್ದರೆ
ನನ್ನನ್ನ ಹೆಂಡತಿಯಂತೆ ಹೇಗೋ ಹಾಗೆ ಸೋದರಿಯಂತೆ ಭಾವಿಸಿ;
ಈ ಬಾಂಧವ್ಯದ ಉತ್ಸವ ನನ್ನ ಮನೆಯಲ್ಲಿ ಒಂದೇ ದಿನ ನನ್ನ
ಖರ್ಚಿನಲ್ಲಿಯೇ ನಡೆಯಲಿ.

ಡ್ಯೂಕ್: ನಿಮ್ಮ ಈ ಸೂಚನೆಗೆ ನನ್ನ ಪೂರ್ಣ ಸಮ್ಮತಿಯಿದೆ.
(ವಯೋಲಳಿಗೆ) ನಿನ್ನ ಯಜಮಾನ ನಿನ್ನ ಬಿಡುಗಡೆ ಮಾಡಿದ್ದಾನೆ.
ಸ್ತ್ರೀಸ್ವಭಾವದ ಕೋಮಲತೆ-ಮೃದುತೆಗಳಿಗೆ
ವಿರುದ್ಧವಾದ ರೀತಿಯಲ್ಲಿ ಇಷ್ಟುದಿನ ನೀನು
ಅವನಿಗೆ ಮಾಡಿರುವ ಸೇವೆಗೋಸ್ಕರವಾಗಿ,
ಇಷ್ಟುದಿನ ನನ್ನ 'ಯಜಮಾನ' ಎಂದದ್ದಕ್ಕಾಗಿ, ಇಗೋ ನನ್ನ ಕೈ
ಹಿಡಿದು, ಇಂದಿನಿಂದ ನಿನ್ನ ಯಜಮಾನನಿಗೆ
ಯಜಮಾನಿಯಾಗಿರು.

ಒಲಿವಿಯ: ಸೋದರಿ, ಅದು ನೀವೇ.

(ಫೇಬಿಯನ್ ಮಾಲ್ವೋಲಿಯೋನೊಂದಿಗೆ ವಾಪಸ್ಸು ಬರುತ್ತಾನೆ)

ಡ್ಯೂಕ್: ಇವನೇ ಏನು ಆ ಹುಚ್ಚ?

ಒಲಿವಿಯ: ಹೌದು ಪ್ರಭು, ಇವನೆ. ಏನು ಸಂಗತಿ ಮಾಲ್ವೋಲಿಯೋ?

ಮಾಲ್ವೋಲಿಯೊ : ಒಡತಿ, ನೀವು ನನಗೆ ಅನ್ಯಾಯ ಮಾಡಿದ್ದೀರಿ, ತೀರ ಅನ್ಯಾಯ.

ಒಲಿವಿಯ : ನಾನೇ ಮಾಲ್ವೋಲಿಯೋ ? ಇಲ್ಲ.

ಮಾಲ್ವೋಲಿಯೋ : ಹೌದು. ನೀವೇ, ದಯೆಯಿಟ್ಟು ಈ ಪತ್ರವನ್ನೋದಿ.
(ಕಾಗದವೊಂದನ್ನು ತೆಗೆದುಕೊಡುತ್ತಾನೆ)

ಇದು ನಿಮ್ಮ ಅಕ್ಷರವಲ್ಲವೆಂದು ನೀವು ಅಲ್ಲಗಳೆವಂತಿಲ್ಲ.
ಇದಕ್ಕಿಂತ ಬೇರೆಯಾದ ಅಕ್ಷರ ಅಥವಾ ಭಾಷೆಯಲ್ಲಿ
ಬರೆಯಬಲ್ಲಿರ ನೀವು ? ಇದನ್ನು ನೀವು ಬರೆದಿಲ್ಲ,
ಇದು ನಿಮ್ಮ ಮೊಹರಲ್ಲವೆಂದು ಹೇಳಿ ನೋಡೋಣ.
ಇದಾವುದನ್ನೂ ನೀವು ಅಲ್ಲಗಳೆಯಲಾರಿರಿ.
ಇದನ್ನೊಪ್ಪಿ, ಮರ್ಯಾದೆಯಿಂದ ಸತ್ಯ ಹೇಳಿ :
ನೀವು ಸ್ಪಷ್ಟ ಪ್ರೇಮಸೂಚನೆಯನ್ನು ಕೊಟ್ಟದ್ದೇಕೆ ?
ಗಾರ್ಟರ್ ಅಡ್ಡಪಟ್ಟಿಯನ್ನ ಧರಿಸಿ ನಗುತ್ತ ಬರಲು ಹೇಳಿದ್ದೇಕೆ ?
ಹಳದಿ ಕಾಲುಚೀಲಗಳನ್ನ ಧರಿಸೆಂದು,
ಸರ್ ಟೋಬಿ ಮತ್ತಿತರ ಹಗುರ ಜನಗಳ ಮೇಲೆ
ದರ್ಪದಿಂದಿರು ಎಂದು ಬರೆದದ್ದೇಕೆ ?
ಆಸೆಗೆ ವಿಧೇಯವಾಗಿ ಇದನ್ನೆಲ್ಲ ನಡೆಸಿದ
ನನ್ನನ್ನು ಸೆರೆಯಲ್ಲಿಡಲು ಸಮ್ಮತಿಸಿದ್ದೇಕೆ ?
ಕತ್ತಲ ಕೋಣೆಯಲ್ಲಿ ಕೂಡಿ, ಪಾದ್ರಿಯನ್ನ ಕಳಿಸಿ
ಯಾವ ಕುತಂತ್ರವೂ ಎಂದೂ ಮಾಡದಿರುವ
ರೀತಿಯಲ್ಲಿ ನನ್ನನ್ನ ಬೆಪ್ಪನನ್ನಾಗಿ ಮೂರ್ಖನನ್ನಾಗಿ
ಮಾಡಿದ್ದೇಕೆ ? ಇದಕ್ಕೆಲ್ಲ ನಿಮ್ಮ ಉತ್ತರವೇನು ?

ಒಲಿವಿಯ : ಅಯ್ಯೋ ಮಾಲ್ವೋಲಿಯೊ, ಇದು ನನ್ನ ಅಕ್ಷರವಲ್ಲ.
ಆದರೂ ಇದು ನನ್ನ ಅಕ್ಷರದಂತಿದೆ —
ಎಂದು ಒಪ್ಪಿಕೊಳ್ಳುತ್ತೇನೆ ನಾನು.
ಖಂಡಿತವಾಗಿ ಇದು ಮರೀಯಳ ಬರವಣಿಗೆ.
ನಿಮಗೆ ಹುಚ್ಚೆಂದು ಅವಳೇ ಮೊದಲು
ಹೇಳಿದವಳೆಂದು ನನಗೀಗ ನೆನಪಾಗುತ್ತಿದೆ.
ಆಮೇಲೆ ನೀವು ನಗುನಗುತ್ತ ಬಂದಿರಿ,
ಇಲ್ಲಿ ಬರೆದಂತೆ ಉಡುಪು ಧರಿಸಿ ನಡೆದಾಡಿದಿರಿ.

ಈ ಸಂಚು ನಿಮ್ಮ ಮೇಲೆ ಕ್ರೂರವಾಗಿ ಎರಗಿತು, ಪಾಪ.
ಆದರೆ ಈ ಸಂಚಿಗೆ ಕಾರಣವೇನು, ಕಾರಣರಾರು
ಎಂದು ನಮಗೆ ತಿಳಿದಾಗ, ಈ ವಿಚಾರದಲ್ಲಿ
ನೀವೇ ಫಿರ್ಯಾದಿ, ನೀವೇ ತೀರ್ಪುಗಾರರು ಕೂಡ.

ಫೇಬಿಯಸ್ : ಒಡತಿಯರೆ, ನನ್ನೆರಡು ಮಾತನ್ನ ಕೇಳಿ :
ನಮ್ಮನ್ನೆಲ್ಲ ಬೆರಗುಗೊಳಿಸಿರುವ ಈ ವಿಷಯ
ಜಗಳಕ್ಕೋ ರಂಪಕ್ಕೋ ಕಾರಣವಾಗಿ ಇಂದಿನ
ಸಂತೋಷವನ್ನ ಹಾಳುಮಾಡದಿರಲಿ.
ಹಾಗಾಗದೆಂದು ಭಾವಿಸಿ ನಾನೊಪ್ಪಿಕೊಳ್ಳುತ್ತೇನೆ :
ಇವರ ಮೊಂಡುತನ–ಒರಟು ವರ್ತನೆಯಿಂದ
ಬೇಸರಗೊಂಡು, ಮಾಲ್ವೋಲಿಯೋ ವಿರುದ್ಧ
ಈ ಸಂಚನ್ನು ಯೋಚಿಸಿದವರು ನಾನು ಮತ್ತು ಸರ್ ಟೋಬಿ.
ಸರ್ ಟೋಬಿಯ ಅಧಿಕ ಒತ್ತಾಯದಿಂದಾಗಿ
ಕಾಗದವನ್ನು ಬರೆದವಳು ಮರೀಯ.
ಇದಕ್ಕಾಗಿ ಅವಳನ್ನವರು ಮದುವೆಯಾಗಿದ್ದಾರೆ?
ಎರಡೂ ಕಡೆಗಳವರಿಗೆ ಆಗಿರುವ ಅನ್ಯಾಯವನ್ನ
ನ್ಯಾಯವಾಗಿ ಪರಿಶೀಲನೆ ಮಾಡಿ ನೋಡಿದರೆ,
ಈ ಹುಡುಗಾಟದ ಪೀಡನೆಯಿಂದ
ದ್ವೇಷಕ್ಕಿಂತ ಹೆಚ್ಚಾಗಿ ನಗುವೇ ಉಂಟಾಗಬಹುದು.

ಒಲಿವಿಯ : ಅಯ್ಯೋ ಪೆದ್ದಣ್ಣ, ನಿಮ್ಮನ್ನಿವರು ಗೊಂದಲಗೊಳಿಸಿದ್ದಾರೆ.

ನಕಲಿ : ಏಕೆ ? ''ಕೆಲವರು ಹಿರಿಯರಾಗಿ ಹುಟ್ಟುತ್ತಾರೆ, ಕೆಲವರು ಹಿರಿತನವನ್ನು ಸಾಧಿಸುತ್ತಾರೆ, ಮತ್ತೆ ಕೆಲವರ ಮೇಲೆ ಹಿರಿತನವೇ ಬಂದೆರಗುತ್ತದೆ''. ಈ ವಿನೋದದಲ್ಲಿ ನಾನೂ ಭಾಗಿ, ಸ್ವಾಮಿ – ನಾನು ಸರ್ ಟೊಪಾಸ್ ಆಗಿದ್ದೆ. ಅದೆಲ್ಲ ನಡೆದಾಯ್ತು. ''ದೇವರಾಣೆ, ನಾನು ಹುಚ್ಚನಲ್ಲ, ನಕಲಿ !'' ಆದರೆ ನಿಮಗೆ ನೆನಪಿದೆಯೆ ? ''ಒಡತಿ, ಈ ಬಂಜೆ ಮೂರ್ಖನ ಮಾತಿಗೇಕೆ ನಗುತ್ತೀರಿ, ನೀವು ನಗದಿದ್ರೆ ಅವನ ಬಾಯಿ ಬಂದಾಗುತ್ತೆ.'' ಈ ರೀತಿ ಕಾಲಚಕ್ರ ಅವರ ಮೇಲೆ ಸೇಡು ತಂದಿದೆ, ಅಷ್ಟೆ

ಮಾಲ್ವೋಲಿಯೊ : ನಾನು ನಿಮ್ಮೆಲ್ಲರ ಮೇಲೆ ಸೇಡು ತೀರಿಸಿಕೊಳ್ತೀನಿ.
(ಅವನು ಹಿಂದಿರುಗಿ ಹೋಗುತ್ತಾನೆ)

ಒಲಿವಿಯ : ಅವರನ್ನ ತೀರ ಅನ್ಯಾಯವಾಗಿ ನಡೆಸಿಕೊಂಡಿದ್ದಾರೆ.

ಡ್ಯೂಕ್ : ಇವರ ಹಿಂದೆ ಹೋಗಿ ಸಮಾಧಾನ ಮಾಡಿ :
ಕ್ಯಾಪ್ಟನ್ನಿನ ವಿಷಯವನ್ನಿನ್ನೂ ಅವರು ಹೇಳಿಲ್ಲ.
ಅದು ತಿಳಿದಾಗ, ಎಲ್ಲರೊಪ್ಪಿಗೆಯ ಹೊನ್ನ ಮುಹೂರ್ತದಲ್ಲಿ,
ನಮ್ಮ ಪ್ರಿಯ ಹೃದಯಗಳ ವಿಧಿಪೂರ್ವಕ ಮಿಲನ.
ಪ್ರಿಯ ಸೋದರಿ, ಅಲ್ಲಿಯವರೆಗೆ ನಾವು
ಬೇರೆ ಹೋಗುವುದೇ ಬೇಡ. ಬಾ, ಸಿಸೇರಿಯೋ,
ನೀನು ಗಂಡುಡುಗೆಯಲ್ಲಿರುವವರೆಗೂ ಹಾಗೆ ಕೂಗುತ್ತೇವೆ.
ಹೆಣ್ಣುಡುಗೆಯಲ್ಲಿ ನೀನು ಬಂದಾಗ,
ನೀನು ಆರ್ಸಿನೋನ ಯಜಮಾನಿ,
ಅವನ ಕಲ್ಪನಾ ಸಾಮ್ರಾಜ್ಯದರಸಿ,
(ನಕಲಿಯನ್ನುಳಿದು ಎಲ್ಲರೂ ಒಳಕ್ಕೆ ಹೋಗುತ್ತಾರೆ).

ನಕಲಿ : (ಹಾಡುತ್ತಾನೆ)
ಚಿಕ್ಕ ಹುಡುಗ ನಾನಾಗಿದ್ದಾಗ,
ಹೇ ಹೋ ಗಾಳಿ ಮಳೆಗಳೊಡನೆ ;
ನನ್ನ ತುಂಟತನ ಆಟಿಕೆ ಲಾಗ,
ಮಳೆಯು ಬರುತ್ತಿತ್ತು ಒಂದೇ ಸಮನೆ.

ತರುಣನ ಹಂತಕೆ ನಾ ಬಂದಾಗ,
ಹೇ ಹೋ ಗಾಳಿ ಮಳೆಗಳೊಡನೆ ;
ಠಕ್ಕ-ಕಳ್ಳನೆಂದು ಕದವೆಳೆದರು ಬೇಗ,
ಮಳೆಯು ಬರುತ್ತಿತ್ತು ಒಂದೇ ಸಮನೆ.

ಅಯ್ಯೋ, ದಾಂಪತ್ಯಕೆ ನಾ ಸಂದಾಗ,
ಹೇ ಹೋ ಗಾಳಿ ಮಳೆಗಳೊಡನೆ ;
ನನ್ನ ಪ್ರತಿಷ್ಠೆಗೆ ಇರಲಿಲ್ಲ ಜಾಗ,
ಮಳೆಯು ಬರುತ್ತಿತ್ತು ಒಂದೇ ಸಮನೆ.

ಆದರೆ ಮಲಗಲು ನಾ ಹೋದಾಗ,
ಹೇ ಹೋ ಗಾಳಿ ಮಳೆಗಳೊಡನೆ ;
ಅತಿಕುಡಿತಕೆ ಬಂದಿತು ಬೇಗವೆ ರೋಗ,
ಮಳೆಯು ಬರುತ್ತಿತ್ತು ಒಂದೇ ಸಮನೆ.

ಬಹಳ ಹಿಂದೆಯೇ ಜಗ ಶುರುವಾಯಿತು,
ಹೇ ಹೋ ಗಾಳಿ ಮಳೆಗಳೊಡನೆ ;
ಆದರೆ ಆಯಿತು, ಆಟವು ಮುಗಿಯಿತು,
ನಿಮಗಾಗಲಿ ಖುಷಿ ಒಂದೇ ಸಮನೆ.

---------

## ಟಿಪ್ಪಣಿಗಳು

ಅಂಕ 1 ದೃಶ್ಯ 1

**''ಆ ಕ್ಷಣವೆ ನಾನಾದೆ ಜಿಂಕೆ''** : ಗ್ರೀಕ್ ಪುರಾಣದಲ್ಲಿ ಬರುವ ಆಕ್ಟೀಯಾನ್ ಎಂಬ ಬೇಟೆಗಾರನ ಕತೆ. ಒಮ್ಮೆ ಅವನು ಬೇಟೆಯಾಡುತ್ತಿದ್ದಾಗ ಡಯಾನಾ ಎಂಬ ದೇವತೆಯು ಸ್ನಾನಮಾಡುತ್ತಿರುವಾಗ ಅವಳು ನಗ್ನವಾಗಿರುವುದನ್ನು ಕಂಡ ; ಇದರಿಂದ ಕೋಪಗೊಂಡ ಅವಳು ಜಿಂಕೆಯಾಗುವಂತೆ ಅವನನ್ನು ಶಪಿಸಿದಳು. ಅವನ ಬೇಟೆನಾಯಿಗಳೇ ಆ ಜಿಂಕೆಯನ್ನು ಛಿದ್ರವಾಗಿ ಮಾಡಿದವು. ಈ ಕತೆ ಓವಿಡ್‌ನ 'ಮೆಟೊಮಾರ್ಫೋಸೆಸ್'ನಲ್ಲಿದೆ.

**''ಯಕೃತ್ತು ಮೆದುಳು ಹೃದಯಗಳಲ್ಲೆಲ್ಲ''** : ಪ್ರಾಚೀನ ನಂಬಿಕೆಯ ಪ್ರಕಾರ ಇವುಗಳು ಕ್ರಮವಾಗಿ ರಾಗದ್ವೇಷಗಳು, ವಿವೇಕ ಹಾಗೂ ಭಾವುಕತೆಗಳ ಸ್ಥಾನಗಳು.

ದೃಶ್ಯ 2

**''ಎಲೀಸಿಯಂ''** : ಇಲ್ಲೀರಿಯ ಎಂಬ ಶಬ್ದಕ್ಕೆ ಜೊತೆಯಾಗುವಂತಹ ಒಂದು ಕಲ್ಪಿತ ಶಬ್ದ ಅಷ್ಟೆ.

**''ಡಾಲ್ಫಿನ್‌ನ ಮೇಲೆ ಕುಳಿತ ಆರಿಯೋನ್‌ನಂತೆ''** : ಗ್ರೀಕ್ ಪೌರಾಣಿಕ ಕವಿ ಹಾಗೂ ವಾದ್ಯಗಾರ ಆರಿಯೋನ್. ಒಮ್ಮೆ ಆರಿಯೋನ್ ಸಿಸಿಲಿಯಿಂದ ಕೋರಿಂಥ್‌ಗೆ ಹಡಗಿನಲ್ಲಿ ಪ್ರಯಾಣಿಸುತ್ತಿರುವಾಗ ನಾವಿಕರು ಇವನ ಕೊಲೆಯ ಸಂಚು ಮಾಡಿದರು ; ಅದನ್ನು ತಿಳಿದ ಆರಿಯೋನ್ ಸಮುದ್ರಕ್ಕೆ ಹಾರಿದಾಗ ಡಾಲ್ಫಿನ್ ಎಂಬ ಮೊಸಳೆಯಂತಹ ಜಲಚರವು ಅವನನ್ನು ಬೆನ್ನಮೇಲೆ ಕೂರಿಸಿಕೊಂಡು ದಡ ಮುಟ್ಟಿಸಿತು.

**''ಖೋಜಾ ಎಂದು... ನೀಡಿ''** : ಕಂಠವು ಒಡೆಯದೆ ಆಳವಾಗಿರಲೆಂದು ಹುಡುಗರನ್ನು ಬಾಲ್ಯದಲ್ಲಿಯೇ ಪುರುಷತ್ವಹೀನರನ್ನಾಗಿ ಮಾಡುತ್ತಿದ್ದರು ; ಇಂಥವರು ಪ್ರಾಚೀನ ಇಟಲಿಯಲ್ಲಿ ಹಾಡುಗಾರರಾಗಿ ಜನಪ್ರಿಯರಾಗಿದ್ದರು.

ದೃಶ್ಯ 3

**'ಆಂಡ್ರ್ಯೂ ಆಗ್ಯುಫೇಸ್'** : ಸರ್ ಆಂಡ್ರ್ಯೂ ಕೊನೆಯ ಹೆಸರಾದ ಆಗ್ಯುಚೀಕ್ (ಬಿಳಿಚಿದ ಕೆನ್ನೆಯವನು) ಎಂಬ ಪದದ ಮೇಲಿನ ಆಟ. ಆಗ್ಯುಫೇಸ್ ಎಂದರೆ ಬಿಳಿಚಿಕೊಂಡ ಮುಖದವನು ಎಂದರ್ಥ.

**''ಗ್ಯಾಲಿಯಾರ್ಡ್ ನೃತ್ಯ''** : ಆ ಕಾಲದ ತುಂಬ ಚಟುವಟಿಕೆಯ ನೃತ್ಯ ವಿಶೇಷ.

"**ಶ್ರೀಮತಿ ಮಾಲ್‌ಳ ಚಿತ್ರ**" : ಒಬ್ಬ ಹೆಣ್ಣನ್ನು ಸೂಚಿಸುವ ಪದ.

"**ವೃಷಭ ರಾಶಿ**" : ಆ ಕಾಲದ ಜ್ಯೋತಿಷಿಗಳ ಪ್ರಕಾರ ಕಾಲು ಮತ್ತು ತೊಡೆಗಳನ್ನು ನಿಯಂತ್ರಿಸುವ ಗ್ರಹ.

ದೃಶ್ಯ 5 "**ಕ್ವಿನಾಪಾಲ ಋಷಿ**" : ಸಂದರ್ಭಕ್ಕೆ ತಕ್ಕಂತೆ ನಕಲಿಯು ಸೃಷ್ಟಿಸಿದ ಒಬ್ಬ ಪೌರಾಣಿಕ ಋಷಿ.

"**ಬುಧ ಸುಳ್ಳು ಹೇಳೋ ಜಾಣ್ಮೇನ ಕರುಣಿಸಲಿ**" : ಬುಧ ಗ್ರಹವು ಕುತಂತ್ರಗಳ ದೇವತೆಯೆಂದು ನಂಬಿಕೆ.

"**ಷರೀಫರ ಕಂಬದ ಹಾಗೆ**" : ಷರೀಫ್ ನಗರಗಳಲ್ಲಿರುತ್ತಿದ್ದ ರಾಜಪ್ರತಿನಿಧಿ. ಅವನ ಅಧಿಕಾರ ಲಾಂಛನವಾಗಿ ಮನೆಯ ಬದಿಯಲ್ಲಿ ಎರಡು ಬಣ್ಣಗಳನ್ನು ಬಳಿದ ಕಂಬವನ್ನು ನೆಟ್ಟಿರುತ್ತಿದ್ದರು.

"**ನನ್ನ ಆಪ್ತ ಸಖಿ**" : Gentle woman ಎಂಬುದಕ್ಕೆ ಸಂವಾದಿ. ಮರೀಯ ಒಲವಿಯಳ ಪರಿಚಾರಕಿಯಾದರೂ ಅದಕ್ಕಿಂತ ಹೆಚ್ಚಿನ ಸಾಮಾಜಿಕ ಸ್ಥಾನವೂ ಇತ್ತು ಅವಳಿಗೆ.

"**ನಿಮ್ಮ ಹಡಗಿನ ಹಾಯಿ ಹಾರಿಸ್ತೀರೇನು**" : ಹೊರಡುತ್ತೀರ ಎಂದರ್ಥ.

"**ಆಲಿವ್ ಹಿಡಿದಿದ್ದೇನೆ**" : ಆಲಿವ್ ಗಿಡದ ಎಲೆಗಳನ್ನು ಹಿಡಿಯುವುದು ಶಾಂತಿ ಸಂದೇಶದ ಸಂಕೇತ. Olive ನಲ್ಲಿ Olivia ಎಂಬ ಅರ್ಥವೂ ಹುದುಗಿರಬಹುದು.

ಅಂಕ 2 ದೃಶ್ಯ 3 "**ಪಿಗೋಗ್ರಾಮಿಟಸ್ ಕತೆ, ವೇಪಿಯನ್‌ರು ಕ್ವೆಬಸ್‌ನ ಭೂ ಮಧ್ಯರೇಖೆ ಮೂಲಕ ಹಾದು ಹೋದ ಕತೆ**" : ತುಂಬ ಪರಿಣಾಮಕಾರಿಯಾಗಬೇಕೆಂದು ನಕಲಿಯು ಬಳಸಿದ್ದ ಅದ್ಭುತವಾಗಿ ಕೇಳಿಸುವ ಅರ್ಥವಿಲ್ಲದ ಶಬ್ದಗಳನ್ನು ನೆನಪಿಟ್ಟುಕೊಂಡಿದ್ದೇನೆಂದು ತೋರಿಸಲು ಸರ್ ಆಂಡ್ರ್ಯೂ ಪ್ರಯತ್ನಿಸುತ್ತಿದ್ದಾನೆ.

"**ಒಬ್ಬ ನೇಕಾರನ ಮೈಯಿಂದ ಮೂರು ಜೀವ ಹೊರಬರತ್ತೆ**" : ಷೇಕ್ಸ್‌ಪಿಯರ್‌ನ ಕಾಲದ ನೇಕಾರರು ತುಂಬ ಮಡಿವಂತರೂ ಭಕ್ತರೂ ಆಗಿದ್ದರು; ಅವರನ್ನಿಲ್ಲಿ ಹಾಸ್ಯ ಮಾಡಲಾಗಿದೆ.

"**ಪಾಂಥಿಸೀಲಿಯ ರಾಣಿ**" : ಅಮೆಜಾನ್‌ನ ರಾಣಿ. ಇಂಥ ತುಂಟತನದ ಯೋಜನೆ ಹಾಕಿರುವುದರಿಂದ ಮರೀಯಳ ಬಗ್ಗೆ

ಮೆಚ್ಚಿಕೆಯಿಂದಲೂ, ಅವಳ ದೇಹ ಚಿಕ್ಕದಾದ್ದರಿಂದ ವ್ಯಂಗ್ಯದಿಂದಲೂ ಹೇಳಿದ ಮಾತು.

ದೃಶ್ಯ 5 ''**ಸ್ಟ್ರಾಚಿ ಹೆಂಡತಿ ಉಡುಪಿನ ಆಳನ್ನ ಮದುವೆ ಆದಳು**'' : ಈ ಮಾತಿಗೆ ಅನೇಕ ವ್ಯಾಖ್ಯಾನಗಳು ನಡೆದಿವೆ, ಆದರೆ ನಿರ್ದಿಷ್ಟ ಅರ್ಥವಿನ್ನೂ ನಿರ್ಧರಿತವಾಗಿಲ್ಲ.

ಅಂಕ 3 ದೃಶ್ಯ 1 ''**ಈ ಟ್ರಾಯಸ್‌ಗೆ..... ಪಂಡರಸ್ ಆಗ್ತೀನಿ**'' : ಗ್ರೀಕ್ ಪುರಾಣ ಕಂತೆಯೊಂದಕ್ಕೆ ಸೂಚನೆ. ಟ್ರಾಯಿಲ್ಲಸ್ ಮತ್ತು ಕ್ರೆಸ್ಸಿಡ ಎಂಬ ಪ್ರೇಮಿಗಳ ಮದುವೆಗೆ ಕ್ರೆಸ್ಸಿಡಳ ಪರವಾಗಿ ಅವಳ ಸೋದರಮಾವ ಪಂಡರಸ್ ಎಂಬುವವನು ನೆರವು ನೀಡುತ್ತಾನೆ.

''**ಭಿಕ್ಷುಗಳನ್ನ ಭಿಕ್ಷೆ ಕೇಳೋದು, ಅಷ್ಟೆ**'' : ರಾಬರ್ಟ್ ಹೆನ್ರಿಸನ್‌ನ 'ಟೆಸ್ಟ್‌ಮೆಂಟ್ ಆಫ್ ಕ್ರೆಸೀಡ್' ಎಂಬ ಗ್ರಂಥದಲ್ಲಿ ಕೊನೆಗೆ ಕ್ರೆಸ್ಸಿಡ ಕುಷ್ಠರೋಗಿಯಾಗಿ ಮನ್ಮಥನ ಕೋಪಕ್ಕೀಡಾಗಿ ಭಿಕ್ಷೆ ಎತ್ತುವ ಸ್ಥಿತಿಗಿಳಿಯುತ್ತಾಳೆ.

''**ಗೋಳಗಳ ಸ್ವರ ಮೇಳ**'' : ನಕ್ಷತ್ರಗಳು ಪ್ರಶಾಂತ ರಾತ್ರಿಯಲ್ಲಿ ಮೃದುವಾಗಿ ಹಾಡುತ್ತವೆಂಬ ನಂಬಿಕೆ.

ದೃಶ್ಯ 2 ''**ನೋಹ ನಾವಿಕನಾಗೋಕಿಂತ ಮುಂಚಿನಿಂದ**'' : ನೋಹ ಮಾನವರ ಮೂಲಪುರುಷನಾದ ಆಡಮ್‌ನಿಂದ ಹತ್ತನೇ ತಲೆಮಾರಿನವನು. ಜಲಪ್ರಳಯದ ಕಾಲದಲ್ಲಿ ದೇವರು ನೋಹನನ್ನು ಮಾನವಸಂತತಿಯ ಮುಂದುವರಿಕೆಗೆ ಆರಿಸಿದ. ಪ್ರಳಯದಲ್ಲಿ ನೋಹನನ್ನುಳಿದು ಮಿಕ್ಕೆಲ್ಲ ಪಾಪಿಗಳು ನಾಶವಾದರು; ನಿಷ್ಕಲ್ಮಶನಾದ ನೋಹ ದೇವರ ಮುನ್ಸೂಚನೆಯಂತೆ ಒಂದು ತೇಲು ಬುಟ್ಟಿಯನ್ನು ನಿರ್ಮಾಣ ಮಾಡಿ ಅದರಲ್ಲಿ ತನ್ನ ಹೆಂಡತಿ-ಮಕ್ಕಳೊಂದಿಗೆ ಸೇರಿ ನೀರಿನಿಂದ ಪಾರಾದ. ಬೈಬಲ್ಲಿನ ಜೆನೆಸಿಸ್ ಎಂಬ ಭಾಗದಲ್ಲಿ ಈ ಕತೆ ಬರುತ್ತದೆ. ಇಲ್ಲಿನ ಅರ್ಥ : ನೋಹ ತೀರ ಪ್ರಾಚೀನನಾದದ್ದರಿಂದ ಅವನಿಗಿಂತ ಹಿಂದೆ ಎಂಬ ವ್ಯಂಗ್ಯ.

''**ಬ್ರೌನ್‌ವಾದಿ ಮಡಿವಂತ**'' : ರಾಬರ್ಟ್ ಬ್ರೌನ್ (ಸು.ಕ್ರಿ.ಶ. 1550-1633) ಎಂಬಾತ ಸ್ಥಾಪಿಸಿದ ಸ್ವತಂತ್ರವಾದಿಗಳ ಶಾಖೆಗೆ ಸೇರಿದವನು, ಆಗಿನ ಕಾಲದಲ್ಲಿ ಸಂಪ್ರದಾಯವಾದಿಗಳ ದೃಷ್ಟಿಯಲ್ಲಿ ನಿಕೃಷ್ಟನಾದವನು.

ದೃಶ್ಯ 4 **''ಜಲವನ್ನ ಮಾಟಗಾತಿ ಹತ್ತಿರ ತೊಗೊಂಡು ಹೋಗು''** : ಜಲ ಎಂದರೆ ಇಲ್ಲಿ ಮೂತ್ರ — ಪರೀಕ್ಷೆಗಾಗಿ. ಬಿಳಿ ಮಾಟಗಾತಿಯರು ಜನರಿಗೆ ಮೂಲಿಕೆಗಳಿಂದ ರೋಗವನ್ನು ಗುಣಪಡಿಸುವುದೇ ಮುಂತಾದ ರೀತಿಯಲ್ಲಿ ಉಪಕಾರಿಗಳಾಗಿದ್ದರು.

ದೃಶ್ಯ 2 **''ಈಜಿಪ್ಷಿನೋರು ಮಂಜಲ್ಲಿ ಒದ್ದಾಡೋ ಹಾಗೆ''** : ಯೆಹೂದ್ಯರ ಪ್ರವಾದಿಯಾದ ಮೋಸಸ್ ಸೃಷ್ಟಿಸಿದ ಮಂಜಲ್ಲಿ ಈಜಿಪ್ಷಿನ ಜನರು ತೊಳಲಿದರೆಂದು ಬೈಬಲ್‌ನಲ್ಲಿ ಕತೆಯಿದೆ.

''ಅಜ್ಜಿ ಆತ್ಮ ಪಕ್ಷೀಲಿ ಸೇರೋ ಸಂಭವ'' : ಗ್ರೀಕ್ ತತ್ವಜ್ಞಾನಿಯಾದ ಪೈಥಾಗೊರಾಸ್ ಆತ್ಮಗಳು ಬೇರೆ ಬೇರೆ ಜನ್ಮಗಳಲ್ಲಿ ಬೇರೆ ಬೇರೆ ಜೀವಜಾತಿಗಳಲ್ಲಿ ಸೇರುವ ಸಂಭವವಿದೆಯೆಂದು ಹೇಳಿದ್ದ.

ಅಂಕ 5 ದೃಶ್ಯ 1 **''ವಲ್ಕನ್‌ನಂತೆ ಕಪ್ಪಾಗಿತ್ತು''** : ವಲ್ಕನ್ ರೋಮ್‌ನ ಯುದ್ಧ ಹಾಗೂ ಲೋಹಕಾರ್ಯಗಳ ದೇವತೆ. ಅವನನ್ನು ಕಮ್ಮಾರನಂತೆ ಚಿತ್ರಿಸುವುದು ವಾಡಿಕೆ.

**''ಸಾವಂಚಿನಲ್ಲಿದ್ದ ಈಜಿಪ್ಷಿನ ಕಳ್ಳ''** : ಹೆಲಿಯೋಡರಸ್‌ನ 'ಇಥಿಯೋಪಿಕ'ದಲ್ಲಿ ಬರುವ ಕತೆಯೊಂದಕ್ಕೆ ಸೂಚನೆ. ಥ್ಯಾಮಿಸ್ ಎಂಬ ಕಳ್ಳನೊಬ್ಬ ಖಾರಿಕ್ಲಿಯ ಎಂಬುವವಳನ್ನು ಪ್ರೀತಿಸುತ್ತಿದ್ದ. ತನ್ನನ್ನು ಶತ್ರುಗಳು ಮುತ್ತಿದಾಗ ಜೀವನದಲ್ಲಿ ಹತಾಶಗೊಂಡ ಥ್ಯಾಮಿಸ್ ತನ್ನ ಪ್ರಿಯತಮೆಯನ್ನು ಕೊಲ್ಲಬೇಕೆಂದು ಬಯಸಿ ಕತ್ತಲಗವಿಯಲ್ಲಿ ಹೊಕ್ಕು, ಕಾಣದೆ ಮತ್ತೊಬ್ಬಳನ್ನು ಕೊಲ್ಲುತ್ತಾನೆ.



..., ಹಿಂದಿನಿ ಜಕ್ಕಪ್ಪಯ್ಯ ಪುಣ್ಯದಿನ, ಮಳ್ಳಿ ತುಳಜಪ್ಪಯ್ಯ ಆರಾಧನೆ

...ಟ್ಟೆಮಾರು ಭದ್ರಾಕಾಳಿ ಉತ್ಸವ, ಮೈಸೂರು ಮಾರಿಶಿಡಿ, ಮಂಗಳೂರು ಮಹಮ್ಮಾಯಿ ರಥ, ಸಾರವಾಡ ...ಂಗಳೂರು ಜಾತ್ರೆ, ದೊಡ್ಡ ಹನಸೋಗಿ ರಥ, ಹೆಬ್ಬಾಳು ರಥ, ಕೈದಾಳೆ ರಥ, ಕುಣಿಗಲ್‌ಹೊಡವತ್ತಿ ...ಮಣ ರಥ, ಕೆ.ಆರ್.ನಗರದೊಡ್ಡ ಹನಸೋಗೆ ಶ್ರೀನಿವಾಸ ರಥ, ಕೋಲಾರಹುಸುಗಟೂರು ಗಂಗಾಧರ ...ಪಾಹನೋತ್ಸವ, ಆನೇಕಲ್‌ಚಿತ್ತನಹಳ್ಳಿ ನಾಗಾರಾಧನೆ, ತಿಪಟೂರುಬಳುವನೇರಲು ಗುಡ್ಡ ...ಶ್ವರ ಜಾತ್ರಾರಂಭ, ಬೆಂ.ಮಲ್ಲೇಶ್ವರಂ ವೇಣುಗೋಪಾಲಸ್ವಾಮಿ ಬ್ರಹ್ಮೋತ್ಸವ, ಹರ್ಲಾಪುರ ...ಶ್ವರ ಪಟ್ಟಾಧಿಕಾರ, ಇಸಾಮುದ್ರ ರಥ, ಗೋವನಕೊಪ್ಪ ಯೋಗಾನಂದ ಆರಾಧನೆ

...ಹಿಳೆಯ ಮಹಿಳಾ ದಿನ, ಹೊಸಹೊಳಲು ಕಲ್ಯಾಣೋತ್ಸವ, ಆದ್ಯಪಾಡಿ, ಪೆರ್ಡೂರು ರಥ, ...ಮ್ಮನಹಳ್ಳಿ। ಏಣಗಿ ರುದ್ರಸ್ವಾಮಿ ರಥ

... ಜಾತ್ರೆ, ಕಿತ್ತಾಲ ಶ್ರೀನಿವಾಸ ರಥ, ಅರಸೀಕೆರೆ ಮನಕತ್ತೂರು ಕಾಲಭೈರವ ರಥ, ಹೊಸಹೊಳಲು ...ಯಣ ರಥ, ಹುಲುಗುಂಡಿ ಉತ್ಸವ, ಬೆಂ.ಇಮ್ಮಡಿಹಳ್ಳಿ ವೆಂಕಟರಮಣ ರಥ, ಹಾನಗಲ್ಲ। ನಿಸ್ಸೀಮ ...ನಿಸ್ಸೀಮೇಶ್ವರ ರಥ, ಸಾದಿಕುಕ್ಕು ಜಾತ್ರೆ

...ನ, ವಿಶ್ವ ಮೂತ್ರಪಿಂಡ ದಿನ, ಕಡನುರು ಭಗವತಿ ಉತ್ಸವ, ಪೆರುವಾಯಿ ಜಾತ್ರೆ, ಆಡೂರು ...ೀತ್ಸವ, ಪಾಂಡವಪುರಕ್ಯಾತನಹಳ್ಳಿ ಕೋದಂಡರಾಮ ರಥ, ಚಿಕ್ಕಮಗಳೂರು ಸೀತಾಳಮಲ್ಲಿಕಾರ್ಜುನ ...ಾರು ಜಾತ್ರೆ

| | | |
|---|---|---|
| 17 | ಚತು | ಹೋಳಿ ಹಬ್ಬ, ಬ್ರಹ್ಮ ಸಾವರ್ಣಿ ಮನ್ವಾದಿ, ಅನಧ್ಯಯನ ತ್ರಯ, ನೆಟ್ಲ ರಥ, ಬಾಗೂರು ಪ್ರಸನ್ನ ಚೆನ್ನಕೇಶವ ರಥ, ಮಧುಗಿರಿಜಿಕ್ಕೇನಹಳ್ಳಿ ಓಬಳದೇವರಗುಡ್ಡ ನೃಸಿಂಹ ರಥ, ಹಾಸನ ಡಿ. ಮಾದೀಹಳ್ಳಿ ವೀರಾಂಜನೇಯ ಮಹಾಭಿಷೇಕ/ಲಕ್ಷ್ಮೀಕೇಶವ ಹನುಮಂತೋತ್ಸವ, ಚಿತ್ರದುರ್ಗ ಡಿ. ಹೊಳಲ್ಕೆರೆಹೊರಕೇರಿ ದೇವರಪುರ ಲಕ್ಷ್ಮೀನೃಸಿಂಹ ರಥ, ಹೊಳೇನರಸೀಪುರ ಲಕ್ಷ್ಮೀನೃಸಿಂಹ ರಥ, ಮಾಗಡಿಸುಗ್ಗನಹಳ್ಳಿ ಲಕ್ಷ್ಮೀನೃಸಿಂಹ ರಥ, ಬೇಲೂರುಹುಲಗುಂಡಿ ಸೌಮ್ಯಕೇಶವ ರಥ, ಹೊಸಕೋಟೆಕಲ್ಕುಂಟೆ ಅಗ್ರಹಾರ ರಂಗನಾಥ ರಥ, ಅಂಬುಗ ಸೌಮ್ಯಕೇಶವ ರಥ, ಯಗಟೀಪುರ ಮಲ್ಲಿಕಾರ್ಜುನ ಗಂಗೋದ್ಭವ, ನೇರಳಕಟ್ಟೆ ಜಾತ್ರೆ, ದೇವರಾಯದುರ್ಗ ರಥ, ತಡಸೀಘಟ್ಟ ಲಕ್ಷ್ಮೀನೃಸಿಂಹ ರಥ, ಕಣ್ವಮಠ ಕೃಷ್ಣದ್ವೈಪಾಯನಾಚಾರ್ಯ ಪುಣ್ಯತಿಥಿ, ಕನಕಗಿರಿ ಧ್ವಜ |
| 18 | ಪೂ | ಹಟ್ಟಿಯಂಗಡಿ ಮಹಾಲಿಂಗೇಶ್ವರ ಜಾತ್ರೆ, ಚನ್ನಬಸವ ಲಿಂಗೈಕ್ಯ ದಿನ, ಪಂಗುಣಿ ಉತ್ತರಂ, ವಿರಾಜಪೇಟೆ ಉತ್ಸವ, ತಲಪಾಡಿ ದುರ್ಗಾಪರಮೇಶ್ವರಿ ರಥ, ಸೋಂದಾ ತ್ರಿವಿಕ್ರಮ, ವೇಣೂರು ಬೆಟ್ಟ ರಥ, ಹೊಳೇನರಸೀಪುರ, ಚಂದ್ರಾಪುರ ರಥ, ನಾಗಮಂಗಲ ರಥ, ಗುಡಗುಂಚಿ ರಥ, ತಾಮ್ರಹಳ್ಳಿ ರಥ, ಯಳಂದೂರು ರಥೋತ್ಸವ, ನಂಬಿಹಳ್ಳಿ ರಥ, ಕಾಡುಗಡಿ ರಥ, ಮರಡಿಲಿಂಗೇಶ್ವರ ರಥ, ನಂಪೂ ಜಾತ್ರೆ, ಸೊಂದಾ ರಥ, ಅಮರಾವತಿ ರಥ, ಗುಡಿಗಂಟೆ ರಥ, ತೀರ್ಥಹಳ್ಳಿನೊಣಬೂರು ಲಕ್ಷ್ಮೀವೆಂಕಟರಮಣ ರಥ, ದೊಡ್ಡಬಳ್ಳಾಪುರತೂಬಗೆರೆ ಲಕ್ಷ್ಮೀವೆಂಕಟರಮಣ ರಥ, ಕಳಸಬನದ ವೀರಭದ್ರ ರಥ, ಕೆ.ಆರ್.ಪೇಟೆಮಡುವಿನಕೋಡಿ ಆಂಜನೇಯ ರಥ, ಚಿಕ್ಕಬಳ್ಳಾಪುರಗೋಪಿನಾಥಬೆಟ್ಟ ಗೋವರ್ಧನಗಿರಿ ಲಕ್ಷ್ಮೀನೃಸಿಂಹ ರಥ, ಚಾಮರಾಜನಗರಕಮರವಾಡಿ ಚೌಡೇಶ್ವರಿ/ಕಾಡೂರಮ್ಮ ರಥ, ಚಿಕ್ಕಮಗಳೂರು ಗುರುನಿರ್ವಾಣ ಮಠ ರಥ, ನಾಗಮಂಗಲ ಸೌಮ್ಯಕೇಶವ ರಥ, ಗುರುಚೈತನ್ಯ ಜನ್ಮದಿನ, ಶ್ರೀಪೆರುಂದೇವಿ ತಿರುನಕ್ಷತ್ರ, ನಂಜನಗೂಡು ತೀರ್ಥಸ್ನಾನ, ನಂದೀಶ್ವರ ಅಷ್ಟಾಹ್ನಿಕ ಪರ್ವ |

| | | |
|---|---|---|
| | | ...ಧಾರವಾಡ ಕೃಷ್ಣಾನಂದ ಆರಾಧನೆ, ಪೈಠಣ ಏಕನಾಥ ಷ... |
| 24 | ಸಪ್ತಮಿ | ಕೊಲ್ಲೂರು ಜಾತ್ರೆ, ವಿಶ್ವ ಕ್ಷಯದಿನ, ಕೆಲವಡಿ ಜಾತ್ರೆ... ಬನ್ನಿಮಹಾಂಕಾಳೀ ರಥ |
| 25 | ಅಷ್ಟಮಿ | ಅನಧ್ಯಯನ, ಕಾಲಾಷ್ಟಮಿ, ಮಂಗಳೂರು ಮಂಗಳಾದೇ... ಪದ್ಮಾವತೀ ರಥ, ಕಟ್ಟೆಮಾಡು ಉತ್ಸವ, ಚಿಕ್ಕಬೆಣಚುಕಲ್ಲು... ದೇವರಹೊಸಹಳ್ಳಿ ವೀರಭದ್ರ ರಥ |
| 26 | ನವಮಿ | ಹರದನಹಳ್ಳಿ ದಿವ್ಯಲಿಂಗ ರಥ, ಪಿರಿಯಾಪಟ್ಟಣ, ಬೆಲಗು... |
| 27 | ದಶಮಿ | ವಿಶ್ವ ರಂಗಭೂಮಿ ದಿನ, ಹೊನ್ನಾಳಿಕುಂದೂರು ಆ... ಹೊಸದುರ್ಗಾಬೆಲಗೂರು ರಾಮೇಶ್ವರ ರಥ |
| 28 | ಏಕಾದಶಿ | ಸರ್ವತ್ರ ಏಕಾದಶಿ, ಪಾಪಮೋಚನೀ ಏಕಾದಶಿ, ಹಿಮ... ಜಯಂತಿ |
| 29 | ದ್ವಾದಶಿ | ಪ್ರದೋಷ |
| 30 | ತ್ರಯೋ | ಮಾಸ ಶಿವರಾತ್ರಿ, ಪೊಳಲಿ, ಶರವೂರು ಉತ್ಸವ, ಅನಧ್ಯ... |
| 31 | ಚತು | ಆಡೂರು ಉತ್ಸವ |

## ...ಯುಕ್ತ ಪಂಚಾಂಗ ವಿಷಯಗಳು ಹಾಗೂ ಹಬ್ಬ-ವ್ರತಗಳ ಕಿರುಪರಿಚಯ (ಹಿಂದಿನ ತಿಂಗಳಿಂದ)

(...ಮುಂದುವರಿದಿದೆ...)

...ಶಿಯ ಪೂರ್ವಾರ್ಧದಿಂದ ಉತ್ತರಾರ್ಧದವರೆಗೆ ಮಾತ್ರ ಇರುತ್ತವೆ. ಶುಭ ಕಾರ್ಯಗಳಿಗೆ ...ೀಗ್ಯವಲ್ಲವೆನ್ನುವರು.

...ಿ ನಕ್ಷತ್ರದಿಂದ ನಿತ್ಯ ನಕ್ಷತ್ರದವರೆಗೂ ಎಣಿಸಿ, ಬಂದ ಸಂಖ್ಯೆಯನ್ನು 9ರಿಂದ ಭಾಗಿಸಿ, ...ದರೆ ಜನ್ಮ, 2 ಸಂಪತ್ತು, 3 ವಿಪತ್ತು, 4 ಕ್ಷೇಮ, 5 ಪ್ರತ್ಯ ಋಕ್, 6 ಸಾಧನ, 7 ವಧ, 8 ...ತ್ರ ತಾರೆಗಳೆಂದು ತಿಳಿಯುವುದು.

**...ಡುವ ಕ್ರಮ :** ಮೊದಲು ಜನ್ಮರಾಶಿಯನ್ನು ತಿಳಿಯುವುದು. ನಂತರ ಇಷ್ಟಕಾಲದಲ್ಲಿ ...ರಾಶಿಯವರೆಗೆ ಎಣಿಸುವುದು. ಹಾಗೆ ಎಣಿಸಿದ ಮೊತ್ತ 1 ಇದ್ದಲ್ಲಿ ದೈಹಿಕ ಸುಖ, ...ಸ್ತು ಲಾಭ, 4ಕ್ಕೆ ರೋಗಭಯ, 5ಕ್ಕೆ ಕಾರ್ಯವಿಘ್ನ, 6ಕ್ಕೆ ಶತ್ರುನಾಶ, 7ಕ್ಕೆ ಅಧಿಕ ...ಆರೋಗ್ಯ, 9ಕ್ಕೆ ಕೆಲಸದಲ್ಲಿ ಅನಾಸಕ್ತಿ, 10ಕ್ಕೆ ಉದ್ಯೋಗ ಬಡ್ತಿ, 11ಕ್ಕೆ ಬಯಕೆ ...2ಕ್ಕೆ ಹಣ ವಿಚಾರಗುವುದೆಂದು ತಿಳಿಯುವುದು.

...5-6-9 ಹಾಗೂ ಕೃಷ್ಣ ಪಕ್ಷದಲ್ಲಿ 4-8-12 ಉತ್ತಮವೆಂದು ಪರಿಗಣಿಸುವರು. ...ರ್ಯವಿದ್ದಲ್ಲಿ ದೋಷ ಪರಿಹಾರಕ್ಕಾಗಿ ಚಂದ್ರಗ್ರಹದ ಪೂಜೆ, ಚಂದ್ರಜಪ ಹಾಗೂ ...ನೀಡುವರು.

...ನ್ಮರಾಶಿಯಿಂದ ಗೋಚಾರದಲ್ಲಿ ಗುರುವು ಇರುವ ರಾಶಿಯವರೆಗೂ ಎಣಿಸಿದಾಗ ಗುರುವು 2- ...ನದಲ್ಲಿದ್ದರೆ ಗುರುಬಲವಿರುತ್ತದೆ. ಗೋಚಾರದ ಸ್ವಕ್ಷೇತ್ರ, ಉಚ್ಚ ಮತ್ತು ಮಿತ್ರ ...ರುವು 2-5-7-9-11ರಲ್ಲಿ ಇಲ್ಲದಿದ್ದರೂ ಗುರುಬಲ ಇರುತ್ತದೆಂದು ತಿಳಿಯುವರು. ...ಮುಖ್ಯವಾಗಿ ಉಪನಯನ ಮಾಡಲಾಗುವುದಿಲ್ಲ. ತೀರಾ ಅನಿವಾರ್ಯವಾದರೆ ಬೃಹಸ್ಪತಿ ಶಾಂತಿ ...ಮಾಡುತ್ತಾರೆ.. ದಶಮದಲ್ಲಿ ಗುರುವಿದ್ದರೆ ಪ್ರತಿಕೂಲ, ಗುರುಬಲವಿಲ್ಲದಿದ್ದರೆ ಚೈತ್ರ ...ನಯನ ಮಾಡಲಾಗುವುದಿಲ್ಲ. ಉಳಿದ ಮಾಸಗಳಲ್ಲೂ ಜನ್ಮ ಪಮ ಗರ್ಭಾಷ್ಟಮ

**ಅಯನಾಂಶ:** ಅಯನಾಂಶ ಎಂದರೆ ವಿಷುವ ಬಿಂದುಗಳ ವ್ಯತ್ಯಾಸ ಎಂದು ಅರ್ಥ. ಪ್ರತಿ ಸಂಕ್ರಮಣಕ್ಕೆ ಮೊದಲಿನ 22ನೇ ದಿನಕ್ಕೆ ಅಯನ ದಿನ ಎಂದು ಹೆಸರು. ಅದು ಒಂದು ಕಾಲದಲ್ಲಿ ಸಂಕ್ರಮಣವಾಗಿದ್ದ ದಿನ. ದೀರ್ಘಕಾಲೀನ ಲೆಕ್ಕಾಚಾರಗಳಿಗೆ ಅಯನಾಂಶ ನೆರವಾಗುತ್ತದೆ.

**ಚಾಂದ್ರಮಾನ:** ಇದು ಚಂದ್ರನ ಚಲನೆಯನ್ನು ಆಧಾರವಾಗಿಟ್ಟುಕೊಂಡು ಮಾಡುವ ಗಣನೆ. ಇದನ್ನು ಲೆಕ್ಕಹಾಕುವಲ್ಲಿ ಎರಡು ಪದ್ಧತಿಗಳಿವೆ. ಒಂದು ಸಾಯನ, ಇದು ಚಂದ್ರನ ಚಲನೆಯನ್ನು ಮಾತ್ರ ಲೆಕ್ಕಹಾಕುತ್ತದೆ. ಇದನ್ನು ಆಧರಿಸಿದ ಕ್ಯಾಲೆಂಡರ್‌ಗಳಲ್ಲಿ ಇಸ್ಲಾಮಿಕ್ ಕ್ಯಾಲೆಂಡರ್ ಪ್ರಧಾನವಾದದ್ದು.

ಇನ್ನೊಂದು ನಿರಯನ ಪದ್ಧತಿ. ಇದನ್ನು ಚಾಂದ್ರ-ಸೌರಮಾನಗಳೆರಡನ್ನೂ ಅವಲಂಬಿಸಿದ ಪಂಚಾಂಗ ಎಂದು ಕರೆಯಬಹುದು. ಹಿಂದೂ ಪಂಚಾಂಗವು ಈ ಪದ್ಧತಿಯನ್ನು ಅವಲಂಬಿಸಿದೆ. ಈ ಮಾನದ ಪ್ರಕಾರ 4 ವಿಘಳಿಗೆಗಳಿಗೆ ಒಂದು ಗಳಿಗೆ, 60 ಘಳಿಗೆಗಳಿಗೆ ಒಂದು ದಿನ. ಇಂತಹ 30 ದಿನಕ್ಕೆ ಒಂದು ಮಾಸ. ಅದರಲ್ಲಿ ಮೊದಲ ಹದಿನೈದು ದಿನ ಹುಣ್ಣಿಮೆಗೆ ಮುಕ್ತಾಯವಾಗುತ್ತದೆ. ಇದು ಶುಕ್ಲಪಕ್ಷ, ಎರಡನೇ ಹದಿನೈದು ದಿನಗಳು ಕೃಷ್ಣಪಕ್ಷ. ಇಂತಹ 12 ಮಾಸಗಳಿವೆ. ಅವೆಂದರೆ ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ. ಇಂತಹ ಒಂದು ಚಾಂದ್ರಮಾಸ 29.53 ಸೌರಮಾನಕ್ಕೆ ಮತ್ತು ಒಂದು ಚಾಂದ್ರಮಾನ 354.34 ಸೌರದಿನಗಳಿಗೆ ಸಮ.

**ಸಂಕ್ರಮಣ :** ಸೂರ್ಯನು ಪ್ರತಿ ರಾಶಿಯನ್ನು ಪ್ರವೇಶಿಸುವುದೇ ಸಂಕ್ರಮಣ. ಒಂದು ವರ್ಷದಲ್ಲಿ ಇಂತಹ 12 ಸಂಕ್ರಮಣಗಳಿರುತ್ತವೆ. ಸಂಕ್ರಮಣದಿಂದ ಸೌರಮಾಸ ಪ್ರಾರಂಭವಾಗುತ್ತದೆ. ಇವುಗಳಲ್ಲಿ ಮಕರ ಸಂಕ್ರಮಣವನ್ನು ವಿಶೇಷವಾಗಿ ಆಚರಿಸುತ್ತಾರೆ. ಮೇಷ ಸಂಕ್ರಮಣದಂದು ಸೌರಯುಗಾದಿ ಸಂಭವಿಸುತ್ತದೆ.

(ಮೇ ತಿಂಗಳಿನಲ್ಲಿ ಮುಂದುವರೆದಿದೆ...)

### ಮಹಾಶಿವರಾತ್ರಿ (ಮಾಘ ಕೃಷ್ಣ ಚತುರ್ದಶಿ) (ಮಾರ್ಚ್ 1, 2022)

## ಮಾರ್ಚ್ ತಿ...

**ಮೇಷ:** ಸಾರ್ವಜನಿಕ ಜೀವನದಲ್ಲಿ ಮನ್ನಣೆ ದೊರಕಲಿದೆ. ಉದ್ಯೋಗಾಕಾಂಕ್ಷಿಗಳಿಗೆ ಉತ್ತಮ ಅವಕಾಶಗಳು ದೊರಕಲಿವೆ. ಕಣ್ಣಿನ ಸಮಸ್ಯೆ ಇರುವವರು ಎಚ್ಚರ ವಹಿಸಿ.

**ವೃಷಭ:** ಸುಲಭವಾಗಿದ್ದ ಗುರಿ ನಿಮ್ಮ ಅತಿ ಉತ್ಸಾಹದಿಂದ ಕಠಿಣವಾಗಿದೆ. ನಿಮ್ಮ ಧೋರಣೆಯನ್ನು ಈಗ ಅಗತ್ಯವಾಗಿ ಬದಲಾಯಿಸಿಕೊಳ್ಳಬೇಕು.

**ಮಿಥುನ:** ಆರೋಗ್ಯದ ವಿಚಾರದಲ್ಲಿ ಎಚ್ಚರಿಕೆ ವಹಿಸಬೇಕು. ತಿಂಗಳ ಕೊನೆಯಲ್ಲಿ ಶುಭ ಸುದ್ದಿ ದೊರಕಲಿದೆ. ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಉತ್ತಮ ಫಲಗಳು ದೊರಕಲಿದೆ.

**ಕರ್ಕಾಟಕ:** ಸಲಹೆಗಳು ಸಕಾಲಕ್ಕೆ ಬರುವುದರಿಂದ ನಿಮ್ಮ ಸಮಸ್ಯೆಗಳು ಪರಿಹಾರಾಗಲಿವೆ. ಬಂಧುಗಳು ನೆರವು ನೀಡುತ್ತಾರೆ. ಉದ್ಯೋಗದಲ್ಲಿ ಬದಲಾವಣೆ...